# KANNADA VACHANA KOUMUDI.

BY


**S. Rama Krishnaya,**

CANARESE PANDIT

ST. ALOYSIUS' COLLEGE,

MANGALORE.


ಸ್ಯೆಂಟ್ ಅಲೋಯಿಸ್ಯುಸ್ ಕೊಲೆಜಿನ

ಕರ್ನಾಟಕ ಪಂಡಿತ

ಸಜೀಪ. ರಾಮಕೃಷ್ಣಯ್ಯನವರಿಂದ

ರಚಿಸಲ್ಪಟ್ಟ

ಕನ್ನಡ ವಚನ ಕೌಮುದಿ.




MANGALORE:

PRINTED AT THE "CODIALBOIL PRESS."

1885.

Price [illegible] Annas.

# KANNADA VACHANA KOUMUDI.

BY

**S. Rama Krishnaya,**

CANARESE PANDIT,

ST. ALOYSIUS' COLLEGE,

MANGALORE.



ಸ್ಯೆಂಟ್ ಆಲೋಯಿಸ Gran ಕೊಲೆಜಿನ
to his kn
ಕನಾ೯ to higher st

ಸಜೀಪ ರಾಮಕೃಷ್ಣಯ್ಯನವರಿಂದ

ರಚಿಸಲ್ಪಟ್ಟ

ಕನ್ನಡ ವಚನ ಕೌಮುದಿ.



MANGALORE:

PRINTED AT THE "CODIALBOIL PRESS,"

1885.

# PREFACE.

The object which the author had in view in composing a new Canarese Grammar for Middle, High and College classes is to put before Teachers a clear and concise collection of the Canarese Grammatical rules, and to give pupils an intelligent method in plain and simple language, which is likely to develope the powers of their understanding as well as those of their memory.

A pupil that has mastered this Grammar, will, it is presumed, have but little to add to his knowledge of Canarese Grammar as he proceeds on to higher studies.

The method pursued in this Grammar differs materially from that of other Grammars, the author being of opinion that a Grammar giving the rules in the form of mere questions and answers without a variety of examples to illustrate the rules, gives undue preponderance to memory and affords too little scope for the understanding and leads to cram rather than to a solid knowledge of the language.

*Mangalore,*
*12th August 1885.*

S. R.






TO

D. P. WARLIKER ESQ. M. R. C. S; L. S. A. (LOND.)

SURGEON H. M'S INDIAN MEDICAL SERVICE,

**THIS CANARESE GRAMMAR**

IS

RESPECTFULLY AND GRATEFULLY

**DEDICATED**

BY THE AUTHOR.

# ಅನುಕ್ರಮಣಿಕೆ.

ಶ್ರೀ

# ಕನ್ನಡ ವಚನ ಕೌಮುದಿ.

---

## ವಾಕ್ಯ.

ನಾವು ಮಾತಾಡುವಾಗ ಶಬ್ದಗಳನ್ನು ಪ್ರಯೋಗಿಸುತ್ತೇವೆ. ಶಬ್ದಗಳ ಕ್ರಮವಾದ ಪ್ರಯೋಗವನ್ನು ಕಲಿಸುವ ವಿದ್ಯೆಗೆ ವ್ಯಾಕರಣವೆಂಬ ಹೆಸರು. "ಹುಡುಗನು ನಡಿಯುತ್ತಾನೆ" ಎಂದು ಹೇಳುವಾಗ ನಾವು ಅರ್ಥವಾಗುವ ಹಾಗೆ ಶಬ್ದಗಳನ್ನು ಪ್ರಯೋಗಿಸುತ್ತೇವೆ; ಈ ಪ್ರಕಾರ ಪ್ರಯೋಗಿಸಿದ ಶಬ್ದಗಳ ಕೂಟಕ್ಕೆ ವಾಕ್ಯವೆಂಬ ಹೆಸರು.

ಒಂದು ವಾಕ್ಯದಲ್ಲಿ ಮುಖ್ಯವಾಗಿ ಎರಡು ಪದಗಳು ಇರಬೇಕು; ಒಂದನೇದು ಕ್ರಿಯೆಯನ್ನು ಮಾಡುವ ವಸ್ತುವನ್ನು ಹೇಳುವ ಪದವು; ಅದಕ್ಕೆ ಆಖ್ಯೆ ಎಂಬ ಹೆಸರು. ಎರಡನೇದು ಆಖ್ಯೆಯ ವಿಷಯವಾಗಿ ಹೇಳುವ ಪದವು; ಅದಕ್ಕೆ ಆಖ್ಯಾತವೆಂಬ ಹೆಸರು. ಮೇಲಿನ ವಾಕ್ಯದಲ್ಲಿ ಹುಡುಗನು ಎಂಬದು ಆಖ್ಯೆ; ನಡಿಯುತ್ತಾನೆ ಎಂಬದು ಆಖ್ಯಾತ.

## ಶಬ್ದ ವಿಧಗಳು.

ಒಂದು ಕಾಡಿನಲ್ಲಿ ಲೆಖ್ಖಮಾಡತ ಕೂಡದಷ್ಟು ಮೃಗಗಳು ಇರುತ್ತವೆ; ಆದರೆ ಅಂಥವುಗಳನ್ನು ಅವುಗಳ ಜಾತಿಯ ಪ್ರಕಾರ "ಹುಲಿ, ಕರಡಿ, ಸಿಂಹ, ಆನೆ" ಎಂಬವಾಗಿ ವಿಂಗಡಿಸಿದರೆ, ಅವುಗಳ ಸಂಖ್ಯೆಯು ಕಡಿಮೆಯಾಗುವದು; ಇದೇ ಪ್ರಕಾರ ಒಂದು ಭಾಷೆಯಲ್ಲಿ ಅನೇಕ ಶಬ್ದಗಳು ಇದ್ದಾಗ್ಯೂ ಅವುಗಳನ್ನು ಕೆಲವು ಭಾಗಗಳಾಗಿ ವಿಂಗಡಿಸಿ, ಶಬ್ದ ವಿಧಗಳಾಗಿ ಮಾಡಿದ್ಧಾರೆ ಹ್ಯಾಗೆಂದರೆ:—

## 1. ನಾಮಪದ.

"ಕೃಷ್ಣ, ಗಂಗೆ, ಪಕ್ಷಿ, ಸಿಟ್ಟು, ನಡತೆ"—ಈ ಶಬ್ದಗಳು ಹೆಸರುಗಳನ್ನು ಹೇಳುತ್ತವೆ; ಆದದರಿಂದ ಇವುಗಳಿಗೆ ನಾಮಪದಗಳೆಂಬ ಹೆಸರು. **ವಸ್ತುಗಳ ಅಥವಾ ಅವುಗಳ ಗುಣ ಕ್ರಿಯಾದಿಗಳ ಹೆಸರನ್ನು ಹೇಳುವ ಪದಗಳು ನಾಮಪದಗಳೆನ್ನಿಸಿ ಕೊಳ್ಳುತ್ತವೆ.**

## 2. ಸರ್ವನಾಮ.

"ಕೃಷ್ಣನು ಬರಲಿಲ್ಲ, ಅವನು ಎಲ್ಲಿಗೆ ಹೋದನು?"—ಈ ವಾಕ್ಯದಲ್ಲಿ "ಕೃಷ್ಣನು" ಎಂದು ಪುನಹ ಅದೇ ಶಬ್ದವನ್ನು ಪ್ರಯೋಗಿಸುವದರ ಬದಲಿಗೆ "ಅವನು" ಎಂಬದನ್ನು ಪ್ರಯೋಗಿಸಿಯದೆ; ಹಾಗೆ ಪ್ರಯೋಗಿಸಿದ "ಅವನು" ಎಂಬದಕ್ಕೆ ಸರ್ವನಾಮವೆಂಬ ಹೆಸರು; ಆದದರಿಂದ **ನಾಮ ಪದದ ಬದಲಿಗೆ ಪ್ರಯೋಗಿಸುವ ಶಬ್ದವು ಸರ್ವನಾಮವೆನ್ನಿಸಿ ಕೊಳ್ಳುವದು.**

## 3. ಕ್ರಿಯಾಪದ.

"ಪಕ್ಷಿಯು ಹಾರುತ್ತದೆ"—ಈ ವಾಕ್ಯದಲ್ಲಿ "ಹಾರುತ್ತದೆ" ಎಂಬದು ಪಕ್ಷಿಯು ಮಾಡುವ ಕ್ರಿಯೆಯನ್ನು ಹೇಳುವ ಕಾರಣ ಅದಕ್ಕೆ ಕ್ರಿಯಾಪದವೆಂಬ ಹೆಸರು; ಆದದರಿಂದ **ವಸ್ತುಗಳು ಮಾಡುವಂಥ ಪಡುವಂಥ ಅಥವಾ ಇರುವಂಥ ಕ್ರಿಯೆಯನ್ನು ಹೇಳುವ ಪದಗಳು ಕ್ರಿಯಾಪದಗಳೆನ್ನಿಸಿ ಕೊಳ್ಳುತ್ತವೆ.**

## 4. ವಿಶೇಷಣ ಪದ.

"ಒಳ್ಳೆ ಹುಡುಗನು ಕಲಿಯುತ್ತಾನೆ"—ಈ ವಾಕ್ಯದಲ್ಲಿ "ಒಳ್ಳೆ" ಎಂಬದು ಹುಡುಗನನ್ನು ವಿಶೇಷಿಸುವದರಿಂದ ಅದಕ್ಕೆ ವಿಶೇಷಣ ಪದವೆಂಬ ಹೆಸರು; ಆದಕಾರಣ **ವಸ್ತುಗಳನ್ನು ವಿಶೇಷಿಸುವ ಪದಗಳು ವಿಶೇಷಣ ಪದಗಳೆನ್ನಿಸಿ ಕೊಳ್ಳುತ್ತವೆ.**

## 5. ಅವ್ಯಯ.

"ಅವನು ಮೆಲ್ಲಗೆ ಬಂದನು"—ಈ ವಾಕ್ಯದಲ್ಲಿ ಮೆಲ್ಲಗೆ ಎಂಬದಕ್ಕೆ ವಿಭಕ್ತಿಪ್ರತ್ಯಯವಾಗಲೀ ಆಖ್ಯಾತ ಪ್ರತ್ಯಯವಾಗಲೀ ಹಚ್ಚ ಕೂಡದಾದ ಕಾರಣ ಅದಕ್ಕೆ ಅವ್ಯಯವೆಂಬ ಹೆಸರು; ಆದದರಿಂದ **ವಿಭಕ್ತಿ ಪ್ರತ್ಯಯವಾಗಲೀ ಆಖ್ಯಾತ ಪ್ರತ್ಯಯವಾಗಲೀ ಹೊಂದದ ಪದಗಳು ಅವ್ಯಯಗಳೆನ್ನಿಸಿ ಕೊಳ್ಳುತ್ತವೆ.**

ಕನ್ನಡ ಭಾಷೆಯಲ್ಲಿ ಎಲ್ಲಾ ಶಬ್ದಗಳನ್ನು ಮೇಲೆ ವಿವರಿಸಿದ ಕ್ರಮ ಪ್ರಕಾರ "ನಾಮಪದ, ಸರ್ವನಾಮ, ಕ್ರಿಯಾಪದ, ವಿಶೇಷಣ ಪದ ಮತ್ತು ಅವ್ಯಯ" ಎಂಬ 5 ಮುಖ್ಯ ಶಬ್ದ ವಿಧಗಳಾಗಿ ವಿಭಾಗಿಸಿದ್ದಾರೆ.

ಈ ವ್ಯಾಕರಣದಲ್ಲಿ ಅಕ್ಷರವಿಚಾರ, ಶಬ್ದಲಕ್ಷಣ, ವಾಕ್ಯ ರಚನೆ ಮತ್ತು ಛಂದೋಲಕ್ಷಣವೆಂಬ 4 ಭಾಗಗಳಿವೆ.

# I. ಅಕ್ಷರ ವಿಚಾರ.

1. ಬಾಯಿಯಿಂದ ಹೊರಡ ಬಹುದಾದ ಧ್ವನಿಯನ್ನು ಬರೆಯಲಿಕ್ಕೆ ಕಲ್ಪಿಸಿದ ಸಂಜ್ಞೆಗೆ ಅಕ್ಷರವೆಂಬ ಹೆಸರು.

2. ಅಕ್ಷರಗಳಲ್ಲಿ ವರ್ಣಾಕ್ಷರಗಳು, ಗುಣಿತಾಕ್ಷರಗಳು ಮತ್ತು ಒತ್ತಕ್ಷರಗಳೆಂಬ ಮೂರು ವಿಧ ಉಂಟು. ಗುಣಿತಾಕ್ಷರಗಳಿಗೆ ಬಳ್ಳಿಗಳು ಅಥವಾ ಕಾಗುಣಿತಾಕ್ಷರಗಳೆಂತಲೂ, ಒತ್ತಕ್ಷರಗಳಿಗೆ ಸಂಯುಕ್ತಾಕ್ಷರಗಳೆಂತಲೂ ಕೆಲವರು ಅನ್ನುತ್ತಾರೆ.

## ವರ್ಣಾಕ್ಷರಗಳು.

3. ಅ ಕಾರ ಮೊದಲುಗೊಂಡು ಳ ಕಾರದ ವರೆಗೆ 56 ವರ್ಣಾಕ್ಷರಗಳು. ಅವು ಯಾವವೆಂದರೆ:—

ಅ ಆ, ಇ ಈ, ಉ ಊ, ಋ ೠ, ಌ ೡ, ಎ, ಏ, ಐ, ಒ, ಓ, ಔ, ಅಂ, ಅಃ.

ಕ ಖ ಗ ಘ ಙ, ಚ ಛ ಜ ಝ ಞ, ಟ ಠ ಡ ಢ ಣ, ತ ಥ ದ ಧ ನ, ಪ ಫ ಬ ಭ ಮ, ಯ ರ ಲ ವ ಶ ಷ ಸ ಹ ಱ ೞ ಳ ✕ ೲ.

4. ವರ್ಣಾಕ್ಷರಗಳಲ್ಲಿ ಅ ಕಾರ ಹಿಡಿದು ಔ ಕಾರದ ವರೆಗೆ 16 ಸ್ವರಗಳೆಂತಲೂ, ಕ ಕಾರ ಹಿಡಿದು ಳ ಕಾರದವರೆಗೆ 36 ವ್ಯಂಜನಗಳೆಂತಲೂ, ಅಂ ಅಃ ${x}_{\kappa}$ ಫ—ಈ 4 ಯೋಗವಾಹಗಳೆಂತಲೂ 3 ವಿಧ. ಸ್ವರಗಳಿಗೆ ಅಚ್ಚುಗಳೆಂತಲೂ, ಜೀವಾಕ್ಷರಗಳೆಂತಲೂ, ವ್ಯಂಜನಗಳಿಗೆ ಹಲ್ಲುಗಳೆಂತಲೂ, ನಿರ್ಜೀವಾಕ್ಷರಗಳೆಂತಲೂ, ಯೋಗವಾಹಗಳಿಗೆ ಅಯೋಗವಾಹಗಳೆಂತಲೂ, ಕೆಲವರು ಅನ್ನುವರು.

5. ಎಲ್ಲಾ ವ್ಯಂಜನಗಳಿಗೆ ಅ ಕಾರವು ಸೇರಿಯದೆ, ಹಾಗೆ ಸ್ವರ ಸೇರದ ವ್ಯಂಜನಕ್ಕೆ ಅರ್ಧಾಕ್ಷರವೆಂಬ ಹೆಸರು. ಉದಾ: ಕ್, ಪ್, ನ್ ಇತ್ಯಾದಿ.

6. ಸ್ವರಗಳಲ್ಲಿ ಹ್ರಸ್ವಗಳೆಂದೂ, ದೀರ್ಘಗಳೆಂದೂ, 2 ವಿಧ; ಅವು ಯಾವವೆಂದರೆ:—

ಅ ಇ ಉ ಋ ಌ ಎ ಒ, ಈ 7 ಹ್ರಸ್ವಗಳು.

ಆ ಈ ಊ ೠ ೡ ಏ ಐ ಓ ಔ, ಈ 9 ದೀರ್ಘಗಳು.

7. ಒಂದೊಂದು ಸ್ವರದ ಹ್ರಸ್ವ ದೀರ್ಘಗಳು ತಮ್ಮೊಳಗೆ ಸವರ್ಣಗಳೆಂತಲೂ, ಸಮಾನಾಕ್ಷರಗಳೆಂತಲೂ, ಅನ್ನಿಸಿ ಕೊಳ್ಳುತ್ತವೆ. ಬೇರೆ ಸ್ವರಗಳು ತಮ್ಮೊಳಗೆ ಅವರ್ಣಗಳಾಗಿರುತ್ತವೆ.

8. ಹ್ರಸ್ವ ದೀರ್ಘ ಸ್ವರಗಳಲ್ಲಿ "ಅ ಆ ಇ ಈ ಉ ಊ ಋ ೠ ಌ ೡ" ಈ 10 ಶುದ್ಧ ಸ್ವರಗಳು; "ಎ ಏ ಒ ಓ" ಈ 4 ಮಿಶ್ರ ಸ್ವರಗಳು "ಐ ಔ" ಈ 2 ಸಂಧಿಸ್ವರಗಳು. "ಇ ಉ" ಈ 2 ಕ್ಕೆ ನಾಮಿಗಳೆಂತಲೂ "ಏ ಓ" ಈ 2 ಕ್ಕೆ ವಕ್ರಗಳೆಂತಲೂ, "ಐ ಔ" ಈ 2 ಕ್ಕೆ ವಕ್ರತಮಗಳೆಂತಲೂ, ಅನ್ನುವದುಂಟು.

9. ವ್ಯಂಜನಗಳಲ್ಲಿ ಕ ಕಾರ ಹಿಡಿದು ಮ ಕಾರದವರೆಗೆ 25 ವರ್ಗೀಯಗಳು, ಯ ಕಾರ ಹಿಡಿದು ಳ ಕಾರದವರೆಗೆ 11 ಅವರ್ಗೀಯಗಳು ವರ್ಗೀಯಗಳಲ್ಲಿ ವರ್ಗ 1 ಕ್ಕೆ 5 ವರ್ಣಗಳ ಪ್ರಕಾರ ಕ ವರ್ಗ, ಚ ವರ್ಗ, ಟ ವರ್ಗ, ತ ವರ್ಗ ಮತ್ತು ಪ ವರ್ಗವೆಂಬ 5 ವರ್ಗಗಳು; ಅವರ್ಗೀಯಗಳಲ್ಲಿ "ಯ ರ ಲ ವ ಱ ೞ ಳ" ಎಂಬವು ಅಂತಸ್ಥಗಳು ಅಥವಾ ಮಧ್ಯಗಳೆಂತಲೂ, "ಶ ಷ ಸ ಹ" ಎಂಬವು ಉಷ್ಮಗಳೆಂತಲೂ, ಅನ್ನಿಸಿ ಕೊಳ್ಳುತ್ತವೆ.

10. ಮೇಲೆ ಹೇಳಿದ ಪ್ರತಿ ವರ್ಗದಲ್ಲಿ 2 ಪರುಷ, 2 ಸರಳ, 1 ಅನುನಾಸಿಕ; ಪರುಷಾಕ್ಷರಗಳಲ್ಲಿಯೂ, ಸರಳಾಕ್ಷರಗಳಲ್ಲಿಯೂ, 1 ನೇದು ಅಲ್ಪಪ್ರಾಣ, 2 ನೇದು ಮಹಾಪ್ರಾಣವೆಂದು ಕೂಡ ಅನ್ನಿಸಿಕೊಳ್ಳುತ್ತವೆ. ಅವರ್ಗೀಯುಗಳಲ್ಲಿ ಉಷ್ಮಗಳು ಮಹಾ ಪ್ರಾಣಗಳಾಗಿರುತ್ತವೆ.

11. ವ್ಯಂಜನಗಳಲ್ಲಿ ಪರುಷಾಕ್ಷರಗಳು ಮತ್ತು ಶ, ಷ, ಸ, ಇವುಗಳಿಗೆ ಅಘೋಷಾಕ್ಷರಗಳೆಂದು ಹೆಸರು. ಉಳಿದವುಗಳು ಘೋಷಾಕ್ಷರಗಳು.

12. ಮೇಲೆ 7 ನೇ ಅಂಕೆಯಲ್ಲಿ ವಿವರಿಸಿದ ಪ್ರಕಾರ ಒಂದೊಂದು ಸ್ವರದ ಹ್ರಸ್ವ ದೀರ್ಘಗಳು ಹ್ಯಾಗೆ ತಮ್ಮಲ್ಲಿ ಸವರ್ಣಗಳಾಗಿರುತ್ತವೆಯೋ ಹಾಗೆಯೇ ವ್ಯಂಜನಗಳಲ್ಲಿ ಪ್ರತಿ ವರ್ಗದ ವ್ಯಂಜನಗಳು ತಮ್ಮೊಳಗೆ ಸವರ್ಣಗಳಾಗಿರುತ್ತವೆ. ಬೇರೆ ವ್ಯಂಜನಗಳು ಅವರ್ಣಗಳು.

13. ಯೋಗವಾಹಗಳಲ್ಲಿ ಅಕಾರದ ಮುಂದಿರುವ 1 ನೆಯದಕ್ಕೆ ಅನುಸ್ವಾರ ಅಥವಾ ಬಿಂದುವೆಂತಲೂ, 2 ನೆಯದಕ್ಕೆ ವಿಸರ್ಗ ಅಥವಾ ವಿಸರ್ಜನೀಯವೆಂತಲೂ, ಕ ಕಾರದ ಹಿಂದಿರುವದಕ್ಕೆ ಜಿಹ್ವಾಮೂಲೀಯವೆಂತಲೂ, ಪ ಕಾರದ ಹಿಂದಿರುವದಕ್ಕೆ ಉಪಧ್ಮಾನೀಯವೆಂತಲೂ ಹೆಸರು. ಈ 4 ವರ್ಣಗಳು ಸ್ವರಗಳಿಗೂ ವ್ಯಂಜನಗಳಿಗೂ ಸಂಬಂಧವಾದವುಗಳಾದ ಕಾರಣ, ಅವುಗಳಿಗೆ ಯೋಗವಾಹಗಳೆಂಬ ಹೆಸರು ಬಂದದೆ.

14. ಅನುಸ್ವಾರದ ಉಚ್ಚಾರಣೆ ಹ್ಯಾಗಂದರೆ:—ಅದು ಯಾವ ವ್ಯಂಜನದ ಹಿಂದೆ ಬರದದೆಯೋ ಆ ವ್ಯಂಜನದ ವರ್ಗದ ಅನುನಾಸಿಕದ ಹಾಗೆ ಉಚ್ಚಾರಣೆಯಾಗುವದು; ಉದಾ: ಮಂಗ. ಇಲ್ಲಿ ಅದು ಕ ವರ್ಗಕ್ಕೆ ಸೇರಿದ "ಗ" ಎಂಬದರ ಹಿಂದೆ ಬರದದೆಯಾದಕಾರಣ ಆ ವರ್ಗದ ಅನುನಾಸಿಕವಾದ "ಙ" ಎಂಬದರ ಹಾಗೆ ಉಚ್ಚಾರಣೆಯಾಯಿತು. ಅವರ್ಗೀಯುಗಳ ಮುಂದೆ ಮಾತ್ರ ಅವಕ್ಕೆ ಶುದ್ಧ ಅನುಸ್ವಾರದ ಉಚ್ಚಾರಣೆ ಬರುವದು; ಉದಾ: ಅಂಶ. ಸಿಂಹ ಇತ್ಯಾದಿ.

15. ವಿಸರ್ಗದ ಉಚ್ಚಾರಣೆಯು ಸ್ವರವಿಲ್ಲದ ಹ ಕಾರಕ್ಕೆ ಸರಿಯಾಗುವದು; ಉದಾ:—ಮನಃಪೂರ್ವಕ.

16. ಕನ್ನಡ ಭಾಷೆಯಲ್ಲಿ ಮಾತ್ರ ಉಪಯೋಗಿಸಲ್ಪಡುವ ವರ್ಣಗಳಿಗೆ ಶೇಷವರ್ಣಗಳೆಂಬ ಹೆಸರು. ಅವು ಯಾವವೆಂದರೆ:—ಎ ಒ ಱ ೞ.

ಇವುಗಳಲ್ಲಿ "ಱ ೞ " ಗಳು ಈಗ ಕನ್ನಡದಲ್ಲಿ ಪ್ರಯೋಗಿಸಲ್ಪಡುವದಿಲ್ಲ; ಅವುಗಳ ಬದಲಿಗೆ ರ ಕಾರ ಉಪಯೋಗಿಸಲ್ಪಡುತ್ತದೆ.

17. ಸಂಸ್ಕೃತದಲ್ಲಿ ಮಾತ್ರ ಪ್ರಯೋಗಿಸಲ್ಪಡುವ ವರ್ಣಗಳಿಗೆ ಕ್ಲೀಬ ವರ್ಣಗಳೆಂಬ ಹೆಸರು. ಅವು ಯಾವವೆಂದರೆ:—ಋ, ೠ, ಌ, ೡ, ಶ, ಷ, ವಿಸರ್ಗ, ಜಿಹ್ವಾಮೂಲೀಯ ಮತ್ತು ಉಪಧ್ಮಾನೀಯ; ಇವುಗಳಲ್ಲಿ ಜಿಹ್ವಾಮೂಲೀಯ ಮತ್ತು ಉಪಧ್ಮಾನೀಯಗಳ ಬದಲಿಗೆ ಈಗ ಸಂಸ್ಕೃತದಲ್ಲಿ ವಿಸರ್ಗವೇ ಉಪಯೋಗಿಸಲ್ಪಡುತ್ತದೆ.

18. ಮೇಲೆ ಹೇಳಿದ ಪ್ರಕಾರ ಈಗ ಉಪಯೋಗವಿಲ್ಲದ 2 ದೇಶೀ ವರ್ಣಗಳು 2 ಕ್ಲೀಬ ವರ್ಣಗಳು ಹೀಗೆ 4 ವರ್ಣಗಳನ್ನು ಬಿಟ್ಟು ಅಕ್ಷರಮಾಲೆಗೆ 52 ವರ್ಣಗಳೆಂದು ಕೆಲವು ವ್ಯಾಕರಣಗಾರರು ಹೇಳುತ್ತಾರೆ.

19. ೠ, ಌ, ೡ, ಙ, ಞ, ಣ, ಳ, ಱ ೞ, ಮತ್ತು ಯೋಗವಾಹಗಳಿಂದ ಆದಿಯಾದ, ೠ, ಌ, ೡ, ಇವುಗಳಿಂದ ಅಂತವಾದ ಕೂಡ ಶಬ್ದಗಳು ಕನ್ನಡದಲ್ಲಿಯೂ ಸಂಸ್ಕೃತದಲ್ಲಿಯೂ ಇಲ್ಲ.

20. ಅ ಆ, ಕವರ್ಗ, ಹ ಮತ್ತು ವಿಸರ್ಗ, ಇವುಗಳು ಕಂಠದಲ್ಲಿ ಹುಟ್ಟುವದರಿಂದ ಕಂಠ್ಯಗಳೆಂದೂ, ಇ ಈ, ಚ ವರ್ಗ, ಯ, ಶ ಕಾರಗಳು ಒಳನಾಲಿಗೆಯಲ್ಲಿ ಹುಟ್ಟುವದರಿಂದ ತಾಲವ್ಯಗಳೆಂದೂ, ಋ ೠ, ಟ ವರ್ಗ, ರ, ಱ, ೞ, ಷ, ಳ ಕಾರಗಳೂ ಬಾಯೊಳಗಣ ಮಾಳಿಗೆಯಲ್ಲಿ ಹುಟ್ಟುವದರಿಂದ ಮೂರ್ಧನ್ಯಗಳೆಂದೂ, ಌ ೡ, ತ ವರ್ಗ, ಲ, ಸ ಕಾರಗಳು ಹಲ್ಲಿನಲ್ಲಿ ಹುಟ್ಟುವದರಿಂದ ದಂತ್ಯಗಳೆಂದೂ, ಉ ಊ, ಪ ವರ್ಗ ಉಪಧ್ಮಾನೀಯಗಳು ತುಟಿಯಲ್ಲಿ ಹುಟ್ಟುವದರಿಂದ ಓಷ್ಠ್ಯಗಳೆಂದೂ, ಜಿಹ್ವಾಮೂಲೀಯವು ಅಣ್ಣಾಲಿಗೆಯಲ್ಲಿ ಹುಟ್ಟುವದರಿಂದ ಜಿಹ್ವಾಮೂಲೀಯವೆಂದೂ, ಅನುಸ್ವಾರವು ಮೂಗಿನಲ್ಲಿ ಹುಟ್ಟುವದರಿಂದ ನಾಸಿಕ್ಯವೆಂದೂ, ಎ ಏ ಐ ಗಳು ಕಂಠ ಮತ್ತು ಒಳನಾಲಿಗೆಯಲ್ಲಿ ಹುಟ್ಟುವದರಿಂದ ಕಂಠತಾಲವ್ಯಗಳೆಂದೂ, ಒ ಓ ಔ ಕಾರಗಳು ಕಂಠ ಮತ್ತು ತುಟಿಗಳಲ್ಲಿ ಹುಟ್ಟುವದರಿಂದ ಕಂಠೋಷ್ಠ್ಯಗಳೆಂದೂ, ವ ಕಾರವು ಹಲ್ಲು ಮತ್ತು ತುಟಿಗಳಲ್ಲಿ ಹುಟ್ಟುವದರಿಂದ ದಂತೋಷ್ಠ್ಯವೆಂದು ಕೂಡ ಅನ್ನಿಸಿಕೊಳ್ಳುತ್ತವೆ.

## ಗುಣಿತಾಕ್ಷರಗಳು.

21. ವ್ಯಂಜನಗಳಿಗೆ ಸ್ವರಗಳನ್ನು ಕೂಡಿಸುವದರಿಂದ ಹುಟ್ಟುವ ಅಕ್ಷರಗಳು ಗುಣಿತಾಕ್ಷರಗಳೆಂದು ಅನ್ನಿಸಿಕೊಳ್ಳುತ್ತವೆ. ಸ್ವರಗಳನ್ನು ಕೂಡಿಸುವಲ್ಲಿ ಅವುಗಳನ್ನು ಇದ್ದೀಯಾಗಿ ಕೂಡಿಸದೆ ಅವುಗಳ ಸಂಜ್ಞೆಗಳನ್ನು ಮಾತ್ರ ಕೂಡಿಸುತ್ತಾರೆ. ಉದಾ: ಕ+ಾ = ಕಾ, ಕ+ಿ = ಕಿ, ಕ+ು = ಕು, ಕ+ೊ = ಕೊ ಇತ್ಯಾದಿ.

## ಒತ್ತಕ್ಷರಗಳು.

22. ವ್ಯಂಜನಗಳನ್ನು ನಡುವಿನಲ್ಲಿ ಸ್ವರವಿಲ್ಲದೆ ಒಂದಕ್ಕೊಂದು ಕೂಡಿಸುವಲ್ಲಿ ಒಂದರ ಕೆಳಗೆ ಮತ್ತೊಂದನ್ನು ಒತ್ತಾಗಿ ಬರೆಯುವದರಿಂದ ಹುಟ್ಟಿದ ಅಕ್ಷರಗಳು ಒತ್ತಕ್ಷರಗಳೆಂದು ಅನ್ನಿಸಿಕೊಳ್ಳುತ್ತವೆ. ಒತ್ತಕ್ಷರಗಳನ್ನು ಹುಟ್ಟಿಸುವಲ್ಲಿ ಒತ್ತಾಗಿ ಬರೆಯುವ ಅಕ್ಷರಗಳಲ್ಲಿ ಕೆಲವು ಇದ್ದಂತೆ ಇರುತ್ತವೆ, ಕೆಲವಕ್ಕೆ ತಲೆಕಟ್ಟುಗಳು ಹೋಗುತ್ತವೆ, ಕೆಲವು ವಿಕಾರವನ್ನು ಹೊಂದುತ್ತವೆ. ಉದಾ: ಜ್ಞ, ತ್ಪ, ಕ್ತ ಇತ್ಯಾದಿ.

23. ರಕಾರಕ್ಕೆ ಬೇರೊಂದು ವ್ಯಂಜನವನ್ನು ಒತ್ತಕ್ಷರವಾಗಿ ಕೂಡಿಸುವಲ್ಲಿ ಹಾಗೆ ಕೂಡಿಸದೆ, ರಕಾರವನ್ನು ಆ ವ್ಯಂಜನದ ಉತ್ತರದಲ್ಲಿ ಅರ್ಧಾಕ್ಷರ ಸ್ವರೂಪವಾಗಿ ಬರೆದು, ಪೂರ್ವದಲ್ಲಿ ಉಚ್ಚರಿಸಿದರೆ ಅದಕ್ಕೆ ರೇಫ ಅಥವಾ ಅರ್ಕಾವತ್ತು ಎಂಬ ಹೆಸರು. ಉದಾ: ಅರ್ಧ ಇದಕ್ಕೆ ಅರ್ಧ.

## ಸಂಧಿ ಪ್ರಕರಣ.

24. ಎರಡು ಶಬ್ದಗಳಲ್ಲಿ ಪೂರ್ವಶಬ್ದದ ಕಡೇ ಅಕ್ಷರಕ್ಕೆ ಪರಶಬ್ದದ ಆದಿ ಅಕ್ಷರವನ್ನು ಕೂಡಿಸಿದರೆ ಸಂಧಿಯೆನ್ನಿಸುವದು. ಸಂಧಿ ಮಾಡದೆ ಪದಗಳನ್ನು ಬರದರೆ ಪ್ರಕೃತಿ ಭಾವವೆನ್ನಿಸುವದು. ಉದಾ: ಸಂಧಿಗೆ—ದೊಡ್ಡ + ಅಪ್ಪ = ದೊಡ್ಡಪ್ಪ. ಪ್ರಕೃತಿ ಭಾವಕ್ಕೆ—ದೊಡ್ಡ ಅಪ್ಪ.

25. ಸಂಧಿಯಲ್ಲಿ ಸ್ವರ ಸಂಧಿ, ವ್ಯಂಜನ ಸಂಧಿ ಎಂಬ 2 ವಿಧ ಉಂಟು. ಕನ್ನಡ ಶಬ್ದಗಳನ್ನು ಕೂಡಿಸುವಲ್ಲಿ, ಕನ್ನಡ ಸಂಧಿ; ಕನ್ನಡ ಭಾಷೆಯಲ್ಲಿ ಸೇರಿದ ಸಂಸ್ಕೃತ ಶಬ್ದಗಳನ್ನು ಕೂಡಿಸುವಲ್ಲಿ ಸಂಸ್ಕೃತ ಸಂಧಿ ಸಹ ಬರುವದು.

26. ಸಂಧಿ ನ್ಯಾಯದಲ್ಲಿ ಲೋಪ, ಆಗಮ ಮತ್ತು ಆದೇಶ; ಈ ಮೂರು ಉಪಾಯಗಳು ಉಂಟು.

I. ಲೋಪವೆಂದರೆ, ಸಂಧಿ ಆಗುವ ಎರಡು ಅಕ್ಷರಗಳಲ್ಲಿ ಒಂದು ಕಾಣದೆ ಹೋಗುವದು. ಉದಾ: ದೊಡ್ಡ + ಅಪ್ಪ = ದೊಡ್ಡಪ್ಪ; ಇಲ್ಲಿ ದೊಡ್ಡ ಎಂಬ ಶಬ್ದದ ಅಂತ ಸ್ವರವಾದ ಅ ಕಾರಕ್ಕೆ ಲೋಪ ಬಂತು. ಈ ಪ್ರಕಾರ ಸ್ವರಕ್ಕೆ ಸ್ವರ ಪರವಾಗಲು, ಪೂರ್ವ ಸ್ವರಕ್ಕೆ ಮಾತ್ರ ಲೋಪ ಬರುವದು.

II. ಆಗಮವೆಂದರೆ ಸಂಧಿಯಾಗುವ ಎರಡು ಅಕ್ಷರಗಳ ನಡುವೆ ಒಂದು ಹೊಸ ಅಕ್ಷರ ಸೇರುವದು. ಉದಾ: ಮರ + ಆಗಿ = ಮರವಾಗಿ. ಇಲ್ಲಿ "ವ" ಆಗಮ ಬಂತು.

III. ಆದೇಶವೆಂದರೆ ಮೊದಲು ಇದ್ದ ಅಕ್ಷರಗಳಲ್ಲಿ ಒಂದು ಅಥವಾ ಕೆಲವು ಅಕ್ಷರಗಳು ಹೋಗಿ, ಅವುಗಳ ಬದಲಿಗೆ ಒಂದು ಹೊಸ ಅಕ್ಷರ ಬರುವದು. ಉದಾ: ಸೋತು + ಹೋಗಿ = ಸೋಥೋಗಿ; ಇಲ್ಲಿ ಪೂರ್ವಪದಾಂತ "ತು" ಉತ್ತರ ಪದಾದಿ "ಹೋ" ಈ ಎರಡು ಅಕ್ಷರಗಳು ಹೋಗಿ, "ಥೋ" ಬಂತು.

## ಕನ್ನಡ ಸ್ವರ ಸಂಧಿ.

27. ಸಂಧಿ ಮಾಡುವದರಿಂದ ಅರ್ಥಕ್ಕೆ ಅಡ್ಡಿ ಆಗುವಲ್ಲಿ ಸಂಧಿ ಮಾಡಲೇ ಬಾರದು. ಸ್ವರಲೋಪದಿಂದ ಅರ್ಥಕ್ಕೆ ಅಡ್ಡಿ ಆಗದಲ್ಲಿ ಪೂರ್ವಪದಾಂತ ಹ್ರಸ್ವ ಸ್ವರಗಳನ್ನು ಲೋಪ ಮಾಡ ಬಹುದು; ದೀರ್ಘಸ್ವರಗಳನ್ನು ಲೋಪ ಮಾಡಲೇ ಕೂಡದು.

28. ಸ್ವರಲೋಪದಿಂದ ಅರ್ಥಕ್ಕೆ ಅಡ್ಡಿ ಆಗುವಲ್ಲಿ ಪೂರ್ವಪದಾಂತ ಅ ಉ ಊ ಋ ೠ ಌ ೡ, ಓ ಔ ಕಾರಗಳ ಮುಂದೆ ವ ಕಾರಾಗಮವೂ ಆ ಇ ಈ ಎ ಏ ಐ ಕಾರಗಳ ಮುಂದೆ ಯ ಕಾರಾಗಮವೂ ಬರುವದು. ಉದಾ: ಮರ + ಆಗಿ = ಮರವಾಗಿ, ಗುರು + ಏ = ಗುರುವೇ, ಹೂ + ಅನ್ನು = ಹೂವನ್ನು, ಪಿತೃ + ಉ = ಪಿತೃವು, ಋೂ + ಉ, = ಋೂವು, ೠ + ಏ = ೠವೇ, ೡ + ಅನ್ನು = ೡವನ್ನು, ಓ + ಉ = ಓವು, ಗೋ + ಆಗಿ = ಗೋವಾಗಿ, ಔ + ಉ = ಔವು, ಆ + ಆ = ಆಯಾ, ಕರಿ + ಆಗಿ, = ಕರಿಯಾಗಿ, ಈ +

ಉತ್ತದೆ = ಈಯುತ್ತದೆ, ಗೋಡೆ+ಅಲ್ಲಿ=ಗೋಡೆಯಲ್ಲಿ, ಮೇ+ಉತ್ತಾ = ಮೇಯುತ್ತಾ, ಕೈ+ಇಂದ=ಕೈಯಿಂದ.

## ಮೇಲಿನ ಸೂತ್ರಕ್ಕೆ ಅಪವಾದವುಗಳು.

ಅ ಕಾರದ ಮುಂದೆ ವ ಕಾರಾಗಮ ಬರುತ್ತದೆ ಎಂಬದಕ್ಕೆ—

(1.) "ಎನ್ನ, ಎಮ್ಮ, ನಿನ್ನ, ನಿಮ್ಮ, ತನ್ನ, ತಮ್ಮ" ಎಂಬ ಅ ಕಾರಾಂತ ಶಬ್ದಗಳ ಮೇಲೆ ಇನ್ನೊಂದು ಅ ಕಾರವು ಸೇರುವಲ್ಲಿ "ಯ" ಆಗಮ ಬರುವದು. ಉದಾ: ಎನ್ನ+ಅ=ಎನ್ನಯ, ತಮ್ಮ+ಅ=ತಮ್ಮಯ ಇತ್ಯಾದಿ.

(2.) ಅವಧಾರಣಾರ್ಥಕ ಏ ಕಾರವಾಗಲೀ ಪ್ರಶ್ನಾವಿಶೇಷಾರ್ಥಕ ಓ ಕಾರವಾಗಲೀ ಅ ಕಾರದ ಮುಂದೆ ಪರವಾಗಲು "ಲ" ಆಗಮ ಬರುವದು. ಉದಾ: ನಿನ್ನಿಂದ+ಏ=ನಿನ್ನಿಂದಲೇ. ಅದರಿಂದ ಓ=ಅದರಿಂದಲೋ, ಇತ್ಯಾದಿ.

ಇ ಕಾರದ ಮುಂದೆ ಯ ಕಾರಾಗಮ ಬರುತ್ತದೆ ಎಂಬದಕ್ಕೆ—

ಸ್ವರಲೋಪದಿಂದಲೂ ಆಗಮದಿಂದಲೂ ಶ್ರುತಿಕಷ್ಟ ಬರುವಲ್ಲಿ ಪೂರ್ವಪದಾಂತ ಇ ಕಾರಕ್ಕೆ ಸ್ವರ ಪರವಾದರೆ ಕಿಯೂವಾತಿ ಎಂಬ ಒತ್ತಕ್ಷರವಾದ ( ್ಯ ) ಯ ಕಾರಾದೇಶವು ಬರುವದು. ಉದಾ: ಓದಿ+ಆನು=ಓದ್ಯಾನು.

ಆ ಮತ್ತು ಈ ಕಾರಗಳ ಮುಂದೆ ಯ ಕಾರಾಗಮ ಬರುತ್ತದೆ ಎಂಬದಕ್ಕೆ—

(1.) ಅದು ಶಬ್ದದ ಸಂಕ್ಷೇಪರೂಪವಾದ ಆ, ಇದು ಶಬ್ದದ ಸಂಕ್ಷೇಪರೂಪವಾದ ಈ, ಎಲ್ಲಾ ಎಂಬ ಶಬ್ದದ ಅಂತಸ್ವರವಾದ ಆ, ಸಂಸ್ಕೃತ ಆ ಕಾರಾಂತ ಶಬ್ದಗಳ ಅಂತವಾದ ಆ, ಇವುಗಳ ಮುಂದೆ ಓಷ್ಠ್ಯ ಮತ್ತು ಔ ಕಾರವನ್ನುಳಿದ ಕಂಠೋಷ್ಠ್ಯ ಸ್ವರಗಳು ಪರವಾದರೆ ವ ಕಾರಾಗಮ ಬರುವದು; ಔ ಕಾರ ಪರವಾದರೆ ವ ಕಾರಾಗಮವಾಗಲೀ ಪ್ರಕೃತಿ ಭಾವವಾಗಲೀ ಬರುವದು. ಉದಾ: ಆ+ಊಟ=ಆವೂಟ; ಈ+ಓಣಿ=ಈವೋಣಿ, ಎಲ್ಲಾ+ಒಂಟೆಗಳು=ಎಲ್ಲಾವೊಂಟೆಗಳು. ನಾನಾ+ಉಡಿಗೆಗಳು=ನಾನಾವುಡಿಗೆಗಳು, ಆ+ಔತಣವು=ಆವೌತಣವು ಅಥವಾ ಆ ಔತಣವು.

(2.) ಚಿಕ್ಕವರ ಕುರಿತು ಹೇಳುವಾಗ "ಬಾ, ತಾ" ಎಂಬ ಶಬ್ದಗಳ ಮುಂದೆ ರ ಕಾರಾಗಮ ಬರುವದು; ಬೇರೆ ಕಡೆಯಲ್ಲಿ ಯ ಕಾರಾಗಮ ಬರುವದು. ಉದಾ: ಬಾ+ಓ=ಬಾರೋ. ತಾ+ಎಂದನು=ತಾರೆಂದನು. ದೊಡ್ಡವರ ಕುರಿತು ಆದರೆ ತಾ+ಎನಗೆ=ತಾಯೆನಗೆ ಸಹ ಆಗ ಬಹುದು.

ಓ ಕಾರದ ಮುಂದೆ ವ ಕಾರಾಗಮ ಬರುತ್ತದೆ ಎಂಬದಕ್ಕೆ—

ಓ ಕಾರಾಂತ ದೇಶೀ ಧಾತುಗಳ ಓ ಸ್ವರದ ಮುಂದೆ ಸ್ವರ ಪರವಾದರೆ ಯ ಕಾರಾಗಮ ಬರುವದು. ಉದಾ: ನೋ+ಉತ್ತದೆ=ನೋಯುತ್ತದೆ.

29. ತಾಲವ್ಯ ವ್ಯಂಜನಗಳಿಗೆ ಸೇರಿದ ಎ ಕಾರಕ್ಕೆ ಮತ್ತು ವ ಕಾರಕ್ಕೆ ಸೇರಿದ ಒ ಕಾರಕ್ಕೆ ಸಹ ಅ ಕಾರಾದೇಶ ಬರುವದು. ಉದಾ: ಚೆಪ್ಪರ=ಚಪ್ಪರ, ಜೆಟ್ಟಿ=ಜಟ್ಟಿ, ವೊಂದು=ವಂದು ಇತ್ಯಾದಿ.

## ಕನ್ನಡು ವ್ಯಂಜನ ಸಂಧಿ.

30. ದೇಶಿ ಸಮಾಸದಲ್ಲಿ ಪರಪದದ ಆದಿ ವ್ಯಂಜನಗಳಾದ ಕ, ತ, ಪ ಕಾರಗಳಿಗೆ ಗ, ದ, ಬ ಕಾರಗಳೂ, ಪ, ಬ, ಮ ಕಾರಗಳಿಗೆ ವ ಕಾರವೂ ಸ ಕಾರಕ್ಕೆ ಚ ಕಾರ ಅಥವಾ ಜ ಕಾರವೂ ಆದೇಶವಾಗಿ ಬರುವವು. ಉದಾ: ಹೊಸ+ಕನ್ನಡು=ಹೊಸಗನ್ನಡು. ಅಡಿ+ತಾವರೆ=ಅಡಿದಾವರೆ. ತೊಮ್+ಪತ್ತು=ತೊಂಬತ್ತು. ಎಣೆ+ಪಕ್ಕಿ=ಎಣೆವಕ್ಕಿ, ಹಿಮ+ಬೆಟ್ಟ=ಹಿಮವೆಟ್ಟ. ಪಡೆ+ಮಣಿ=ಪಡೆವಣಿ, ಇನ್+ಸರ=ಇಂಚರ. ಮುನ್+ಸೆರಗು=ಮುಂಜೆರಗು ಇತ್ಯಾದಿ.

31. ಸ್ವರ ಸೇರದ ಅನುನಾಸಿಕಕ್ಕೆ ಮತ್ತೊಂದು ವ್ಯಂಜನವು ಪರವಾದರೆ ಅದಕ್ಕೆ ಬಿಂದು ಸ್ವರೂಪವು ಬರುವದು. ಉದಾ: ಮುನ್+ದಾರಿ=ಮುಂದಾರಿ.

32. ಸ್ವರ ಸೇರದ ರ ಕಾರಕ್ಕೆ ಮತ್ತೊಂದು ವ್ಯಂಜನವು ಪರವಾದರೆ ಅದಕ್ಕೆ ರೇಫ ಸ್ವರೂಪವು ಬರುವದು. ಉದಾ: ಎದುರ್+ಕೊಳ್ಳು=ಎದುರ್ಗೊಳ್ಳು.

33. ದ್ವಿತ್ವ ಹೊಂದಿದ ಅಂತಾಕ್ಷರಕ್ಕೆ ಮತ್ತೊಂದು ವ್ಯಂಜನವು ಒತ್ತಕ್ಷರವಾಗಿ ಸೇರುವಲ್ಲಿ ಆ ದ್ವಿತ್ವಕ್ಕೆ ಲೋಪ ಬರುವದು. ಉದಾ: ಕಲ್ಲು+ಮಳೆ=ಕಲ್ಮಳೆ, ಅನ್ನು+ದು=ಅನ್ದು (ಅಂದು) ಇತ್ಯಾದಿ.

34. ದೇಶಿ ಸಮಾಸದಲ್ಲಿ ಪೂರ್ವಪದಾಂತ ಡ ಕಾರಕ್ಕೆ ಳ ಕಾರಾದೇಶ ಬರುವದು. ಉದಾ: ಕಾಡ್+ಕಿಚ್ಚು=ಕಾಳ್ಗಿಚ್ಚು, ಎರಡ್+ಮೂರು=ಎರಳ್ಮೂರು ಇತ್ಯಾದಿ.

35. ಪತ್ತು ಎಂಬ ಶಬ್ದಕ್ಕೆ ಒಂದು ಮತ್ತು ಎರಡು ಶಬ್ದಗಳು ಪರವಾದ್ದಲ್ಲಿ ಪೂರ್ವ ಪದಾಂತ ತ ಕಾರಕ್ಕೆ ನ ಕಾರವೂ, ಮೂರು ನಾಲ್ಕು ಎಂಬ ಶಬ್ದಗಳು ಪರವಾದ್ದಲ್ಲಿ ದಿ ಕಾರವೂ ಐದು, ಆರು, ಏಳು ಮತ್ತು ಎಂಟು.—ಈ ಶಬ್ದಗಳು ಪರವಾದ್ದಲ್ಲಿ ದಿನ್ ಕೂಡ ಆದೇಶವಾಗಿ ಬರುವವು. ಉದಾ: ಹತ್ತು+ಒಂದು=ಹನ್ನೊಂದು ಇತ್ಯಾದಿ.

36. ಹೊಸ ಮತ್ತು ಹಳೆ, ಈ ಶಬ್ದಗಳಿಗೆ ಅನು ಎಂಬದು ಪರವಾದರೆ ನಡುವಿನಲ್ಲಿ ಬ ಕಾರಾಗಮ ಬರುವದು. ಉದಾ: ಹೊಸ-ಅನು=ಹೊಸಬನು, ಹಳೆ+ಅನು=ಹಳೆಬನು.

37. ಹಳೆಗನ್ನಡು, ಸಂಸ್ಕೃತ ಮತ್ತು ಅನ್ಯದೇಶಿ ಶಬ್ದಗಳಲ್ಲಿ ಅನೇಕವು ಸ್ವರ ಸೇರದ ವ್ಯಂಜನಾಂತಗಳಾಗಿರುತ್ತವೆ, ಅವುಗಳನ್ನು ಹೊಸಗನ್ನಡದಲ್ಲಿ ಉಪಯೋಗಿಸುವಾಗ ಉ ಕಾರವನ್ನು ಸೇರಿಸುತ್ತಾರೆ. ಉದಾ: ಕಾಲ್=ಕಾಲು; ಆದರೆ ಈ ಪ್ರಕಾರ ಉ ಕಾರ ಸೇರುವಲ್ಲಿ ಲಘು ಅಕ್ಷರಕ್ಕೆ ಪರವಾದ ಣ ತ ಯ ಲ ಳ, ಇವುಗಳಿಗೆ ದ್ವಿತ್ವ ಬರುತ್ತದೆ. ಉದಾ: ಕಣ್=ಕಣ್ಣು, ಮರುತ್=ಮರುತ್ತು, ಮೆಯ್=ಮೆಯ್ಯು, ಕಲ್=ಕಲ್ಲು, ಮುಳ್=ಮುಳ್ಳು; ಮತ್ತು ಟ, ತಗಳಿಗೆ ಉ ಕಾರವಲ್ಲದೆ ಬೇರೆ ಸ್ವರಗಳು ಪರವಾದ್ದಲ್ಲಿ ಕೂಡ ದ್ವಿತ್ವ ಬರುವದು. ಉದಾ: ನಟ್+ಅಡವಿ=ನಟ್ಟಡವಿ, ಒತ್+ಆಟ=ಒತ್ತಾಟ ಇತ್ಯಾದಿ.

38. ಒರ್, ಇರ್, ಮೂರ್ ಇವುಗಳಿಗೆ ಬೇರೆ ಶಬ್ದಗಳು ಪರವಾಗುವಲ್ಲಿ ಪೂರ್ವಪದಾಂತ ರ ಕಾರಕ್ಕೆ ಲೋಪ ಬರುವದು. ಹೀಗೆ ಲೋಪ ಬಂದಲ್ಲಿ ಪರಪದದ ಆದಿ ವ್ಯಂಜನಕ್ಕೆ ದ್ವಿತ್ವ ಬರುವದು. ಉದಾ: ಒರ್+ಕೈ=ಒಕ್ಕೈ, ಇರ್+ಕಡೆ=ಇಕ್ಕಡೆ, ಮೂರ್+ಪಾವು=ಮುಪ್ಪಾವು ಇತ್ಯಾದಿ.

39. (I) ಹಳೆಗನ್ನಡು ಸಮಾಸಗಳಲ್ಲಿ ಹಲವಕ್ಕೆ ಪೂರ್ವಪದದ ಅಂತಾಕ್ಷರವು ಲೋಪವಾಗುವದು. (II) ಈ ಪ್ರಕಾರ ಲೋಪವಾದ ಮೇಲೆ ಪರಪದ ಆದಿ ವ್ಯಂಜನಕ್ಕೆ ಪರಸವರ್ಣಾದೇಶ ಬರುವದು. ಉದಾ: 1. ಕೆಂಪು+ಜೆಡೆ=ಕೆಂ

ಚೆಪ್ಪೆ, ಕೆಂಪು+ನೈದಿಲೆ=ಕೆನ್ನೈದಿಲೆ. II. ಕೆಂಪು+ಕೆಂದ = ಕೆಂಗೆಂದ, ಇಂಪು + ಕಡಲು = ಇಂಗಡಲು ಇತ್ಯಾದಿ.

40. I. ಇದಲ್ಲದೆ ದ್ವಿರ್ವಚನದಲ್ಲಿಯೂ ಕೆಲವು ಸಾರಿ ಪೂರ್ವಪದದ ಅಂತಾಕ್ಷರಕ್ಕೆ ಲೋಪ ಬರುವದು. ಉದಾ: ಮೆಲ್ಲನೆ + ಮೆಲ್ಲನೆ = ಮೆಲ್ಲ ಮೆಲ್ಲನೆ. ಕೆಳಗೆ + ಕೆಳಗೆ = ಕೆಳ ಕೆಳಗೆ, ನುಡಿದು + ನುಡಿದು = ನುಡಿ ನುಡಿದು ಇತ್ಯಾದಿ.

II. ಮತ್ತು ಗುಣವಾಚ್ಯಗಳಲ್ಲಿ ಸಮಯವಾಚ್ಯಗಳಲ್ಲಿ ಸ್ಥಳವಾಚ್ಯಗಳಲ್ಲಿ ಅತ್ಯಧಿಕತ್ವವನ್ನು ತೋರಿಸುವಾಗ ದ್ವಿರ್ವಚನಗಳಲ್ಲಿ ಪೂರ್ವ ಪದಾಂತದ ದ, ಡ ಗಳಿಗೂ ಪೂರ್ವ ಪದಾಂತಕ್ಕೆ ಲುಪ್ತ ಬಂದಲ್ಲಿ ಉಪಾಂತವಾದ ದ, ರ ಗಳಿಗೂ ಟ್ಟ ಆದೇಶ ಬರುವದು. ಉದಾ: ನಡು + ನಡು = ನಟ್ಟನಡು, ಕಡು + ಕಡು = ಕಟ್ಟಕಡು, ಕಡೆ + ಕಡೆ = ಕಟ್ಟಕಡೆ, ಬದಿ + ಬದಿ = ಬಟ್ಟಬದಿ, ತುದಿ + ತುದಿ = ತುಟ್ಟತುದಿ, ಮೊದಲು + ಮೊದಲು = (ಮೊದ ಮೊದಲು) ಮೊಟ್ಟಮೊದಲು, ಬರಿದು + ಬರಿದು = (ಬರಿಬರಿದು) ಬಟ್ಟಬರಿದು.

III. ತಜ್ಜಾತಿ ದ್ವಿರ್ವಚನದಲ್ಲಿ ಪರಪದಕ್ಕೆ ಆದಿಯಾದ ಹ್ರಸ್ವಾಕ್ಷರಕ್ಕೆ ಗಿ, ದೀರ್ಘಾಕ್ಷರಕ್ಕೆ ಗೀ ಕೂಡ ಆದೇಶ ಬರುವವು. ಉದಾ: ಎಣ್ಣೆ + ಎಣ್ಣೆ = ಎಣ್ಣೆಗಿಣ್ಣೆ, ಆಟ + ಆಟ = ಆಟಗೀಟ ಇತ್ಯಾದಿ.

## ಸಂಸ್ಕೃತ ಸ್ವರ ಸಂಧಿ.

41. ಸಂಸ್ಕೃತ ಸ್ವರ ಸಂಧಿಯು ಸವರ್ಣದೀರ್ಘ, ಯಣ್ಣು, ಗುಣ ಮತ್ತು ವೃದ್ಧಿ ಯೆಂಬ 4 ವಿಧವಾಗಿರುತ್ತದೆ.

I. ಸವರ್ಣ ಸ್ವರಗಳು ಒಂದಕ್ಕೊಂದು ಪರವಾಗಿ ದೀರ್ಘವಾಗುವದೇ ಸವರ್ಣದೀರ್ಘವು. ಉದಾ: ಪದ + ಅಂತ = ಪದಾಂತ. ಕವಿ + ಈಶ = ಕವೀಶ, ಕವಿ + ಇಂದ್ರ = ಕವೀಂದ್ರ. ಗುರು + ಉಕ್ತಿ = ಗುರೂಕ್ತಿ, ಇತ್ಯಾದಿ.

II. ಯ ವ ರ ಲ, ಈ ವರ್ಣಗಳಿಗೆ ಯಣ್ಣೆಂಬ ಹೆಸರು. ಇ, ಉ, ಋ, ಌ ಕಾರಗಳಿಗೆ ಅವುಗಳ ಅಸವರ್ಣ ಸ್ವರಗಳು ಪರವಾಗಲು ಇ ಕಾರಕ್ಕೆ ಯ ಕಾರವೂ ಉ ಕಾರಕ್ಕೆ ವ ಕಾರವೂ, ಋ ಕಾರಕ್ಕೆ ರ ಕಾರವೂ ಌ ಕಾರಕ್ಕೆ ಲ ಕಾರವೂ ಬರುವದು, ಇದಕ್ಕೆ ಯಣ್ಣು ಸಂಧಿಯೆಂಬ ಹೆಸರು. ಉದಾ:

ಅತಿ+ಉತ್ತಮ = ಅತ್ಯುತ್ತಮ, ಬಿಂದು+ಅಕ್ಷರ = ಬಿಂದ್ವಕ್ಷರ, ಪಿತೃ+ ಅರ್ಜಿತ = ಪಿತ್ರಾರ್ಜಿತ. ಌ+ಆಕೃತಿ = ಲಾಕೃತಿ ಇತ್ಯಾದಿ.

III. ಅ ಏ ಓ, ಈ ಸ್ವರಗಳಿಗೆ ಗುಣವೆಂಬ ಹೆಸರು. ಅ ಆ ಕಾರಗಳಿಗೆ ಇ ಈ ಕಾರಗಳು ಪರವಾದರೆ ಏ ಕಾರವೂ ಅವುಗಳಿಗೆ ಉ ಊ ಕಾರಗಳು ಪರವಾದರೆ ಓ ಕಾರವೂ ಅವುಗಳಿಗೆ ಋ ಕಾರ ಪರವಾದರೆ ಅರ್ ಕಾರವೂ ಆಗುವದು. ಇದಕ್ಕೆ ಗುಣ ಸಂಧಿ ಎಂಬ ಹೆಸರು. ಉದಾ: ಅಮರ+ಇಂದ್ರ = ಅಮರೇಂದ್ರ ಗಣ+ಈಶ = ಗಣೇಶ, ರಥ+ಉತ್ಸಾಹ = ರಥೋತ್ಸಾಹ, ಜನ್ಮ+ ಋಕ್ಷ = ಜನ್ಮರ್ಕ್ಷ ಇತ್ಯಾದಿ.

ಆದರೆ ಸ್ವ ಶಬ್ದಕ್ಕೆ ಈರ, ಈರಿನ್, ಈರಿಣಿ; ಅಕ್ಷ ಶಬ್ದಕ್ಕೆ ಊಹಿನಿ; ಪ್ರ ಎಂಬ ಉಪಸರ್ಗಕ್ಕೆ ಊಹ ಊಢ ಊಢಿ, ಇವುಗಳು ಪರವಾದರೆ ಪೂರ್ವ ಪದಾಂತ ಮತ್ತು ಪರಪದಾದಿ ಈ ಎರಡು ವರ್ಣಗಳಿಗೂ ಒಂದು ವೃದ್ಧಿ ಆದೇಶ ಬರುವದು. ಇದು ಗುಣ ಸಂಧಿಗೆ ಅಪವಾದವಾಗಿರುತ್ತದೆ. ಉದಾ: ಸ್ವ+ಈರ=ಸ್ವೈರ, ಸ್ವ+ಈರಿಣಿ=ಸ್ವೈರಿಣಿ, ಅಕ್ಷ+ಊಹಿನಿ=ಅಕ್ಷೌಹಿನಿ, ಪ್ರ+ಊಢ=ಪ್ರೌಢ, ಪ್ರ+ಊಢಿ=ಪ್ರೌಢಿ ಇತ್ಯಾದಿ.

IV. ಆ, ಐ, ಔ, ಇವುಗಳಿಗೆ ವೃದ್ಧಿ ಎಂಬ ಹೆಸರು. ಅ ಆ ಕಾರಗಳಿಗೆ ಏ ಐ ಕಾರಗಳು ಪರವಾದರೆ ಐ ಕಾರವೂ ಅವುಗಳಿಗೆ ಓ ಔ ಕಾರಗಳು ಪರವಾದರೆ ಔ ಕಾರವೂ ಬರುವದು. ಇದಕ್ಕೆ ವೃದ್ಧಿ ಸಂಧಿ ಎಂಬ ಹೆಸರು.

ಆದರೆ ಅ ಆ ಕಾರಾಂತ ಉಪಸರ್ಗಕ್ಕೆ ಏ ಓ ಕಾರಗಳಿಂದ ಆದಿಯಾದ ಕೃದಂತಗಳು ಪರವಾದರೆ ಪರಪದಾದಿ ಸ್ವರವೇ ಬರುವದು. ಮತ್ತು ಅ ಆ ಕಾರಾಂತ ಶಬ್ದಗಳಿಗೆ ಓಷ್ಠ ಮತ್ತು ಓತು ಶಬ್ದಗಳು ಪರವಾದಲ್ಲಿ ಕೂಡ ಪರಪದಾದಿ ಸ್ವರ ಬರುವದುಂಟು. ಇದು ವೃದ್ಧಿ ಸಂಧಿಗೆ ಅಪವಾದ; ಇದಕ್ಕೆ ಪರರೂಪ ಸಂಧಿ ಎಂಬ ಹೆಸರು. ಉದಾ: ಪ್ರ+ಏಜನ = ಪ್ರೇಜನ, ಪ್ರ+ ಓಷನ = ಪ್ರೋಷನ, ಕಂಠ+ಓಷ್ಠ = ಕಂಠೋಷ್ಠ ಅಥವಾ ಕಂಠೌಷ್ಠ, ಸ್ಥೂಲ+ಓತು = ಸ್ಥೂಲೋತು ಅಥವಾ ಸ್ಥೂಲೌತು.

42. ಸಂಯುಕ್ತಾಕ್ಷರಗಳ ಮುಂದೆ ಸ್ವರಗಳು ಪರವಾಗುವಲ್ಲಿ ಏ ಕಾರಕ್ಕೆ ಅಯ್, ಓ ಕಾರಕ್ಕೆ ಅವ್, ಐ ಕಾರಕ್ಕೆ ಆಯ್, ಔ ಕಾರಕ್ಕೆ ಆವ್ ಆದೇಶ

ಬರುವದು. ಇದಕ್ಕೆ ಅಯಾದ್ಯಾದೇಶ ಸಂಧಿ ಎಂಬ ಹೆಸರು. ಉದಾ: ಏ ಕಾರಕ್ಕೆ ಉದಾಹರಣೆ ಯಿಲ್ಲ. ದ್ಯೋ+ಇಂದ್ರ=ದ್ಯವೀಂದ್ರ. ರೈ+ಆನಂದ=ರಾಯಾನಂದ, ನೌ+ಆರೋಹಣ=ನಾವಾರೋಹಣ ಇತ್ಯಾದಿ.

ಸಂಯುಕ್ತಾಕ್ಷರವಲ್ಲದ ಗೋ ಎಂಬದರ ಮುಂದೆ ಸ್ವರಪರವಾದರೆ ಅವ ಆದೇಶ ಬರುತ್ತದೆ; ಇದು ಮೇಲೆ ಹೇಳಿದ ಸೂತ್ರಕ್ಕೆ ಅಪವಾದ. ಉದಾ: ಗೋ + ಇಂದ್ರ = ಗವೇಂದ್ರ. ಗೋ + ಅಕ್ಷ = ಗವಾಕ್ಷ ಇತ್ಯಾದಿ.

## ಸಂಸ್ಕೃತ ವ್ಯಂಜನ ಸಂಧಿ.

43. ಸಂಸ್ಕೃತ ವ್ಯಂಜನ ಸಂಧಿಯಲ್ಲಿ ಶ್ಚುತ್ವ, ಷ್ಟುತ್ವ, ಅನುಸ್ವಾರ, ವಿಸರ್ಗ, ಅನುನಾಸಿಕ, ಜಶ್ತ್ವ, ಚರ್ತ್ವ, ಛತ್ವ ಮುಂತಾದ ಹಲವು ವಿಧವುಂಟು; ಅವುಗಳಲ್ಲಿ ಮುಖ್ಯವಾದವುಗಳನ್ನು ಈ ಕೆಳಗೆ ವಿವರಿಸಿ ಅಧೆ.

1. ಶ ಕಾರ ಚ ವರ್ಗಗಳಿಗೆ ಶ್ಚು ಎಂದು ಹೆಸರು; ಸ ಕಾರ ತ ವರ್ಗಗಳಿಗೆ ಶ ಕಾರ ಚ ವರ್ಗಗಳು ಪರವಾದರೆ ಸ ಕಾರಕ್ಕೆ ಶ ಕಾರವೂ ತ ವರ್ಗಕ್ಕೆ ಚ ವರ್ಗವೂ ಬರುವದು. ಉದಾ: ಪಯಸ್+ಶಯನ ಪಯಶ್ಶಯನ, ಪಯಸ್+ಚರ=ಪಯಶ್ಚರ, ತತ್+ಜಾತಿ=ತಜ್ಜಾತಿ ಇತ್ಯಾದಿ.

2. ಷ ಕಾರ ಟ ವರ್ಗಗಳಿಗೆ ಷ್ಟು ಎಂಬ ಹೆಸರು; ಸ ಕಾರ ತ ವರ್ಗಗಳಿಗೆ ಟ ವರ್ಗವು ಪರವಾದ್ದಲ್ಲಿ ಸ ಕಾರಕ್ಕೆ ಷ ಕಾರವೂ ತ ವರ್ಗಕ್ಕೆ ಟ ವರ್ಗವೂ ಬರುವದು. ಸ ಕಾರಕ್ಕೆ ಷ ಕಾರ ಪರವಾದ್ದಲ್ಲಿ ಕೂಡ ಷ ಕಾರವೇ ಬರುವದು. ಉದಾ: ಅಯಸ್+ಟಂಕ=ಅಯಷ್ಟಂಕ, ತತ್+ಟೀಕೆ=ತಟ್ಟೀಕೆ, ತಪಸ್ ಷಡ್ಭಾಗ=ತಪಷ್ಷಡ್ಭಾಗ ಇತ್ಯಾದಿ.

3. ಮ ಕಾರಕ್ಕೆ ವ್ಯಂಜನ ಪರವಾದರೆ ಅನುಸ್ವಾರ ಬರುವದು. ಉದಾ: ಅಸ್ಮದ್+ಸಮಯ=ಅಸ್ಮಂ ಸಮಯ.

4. ರ ಕಾರ ಸ ಕಾರಗಳಿಗೆ ಕ ಖ, ಪ ಫ, ಶ ಷ ಸ, ಇವುಗಳು ಪರವಾದರೆ ವಿಸರ್ಗ ಬರತ್ತದೆ. ಉದಾ. ಪುನರ್+ಶಯನ=ಪುನಃಶಯನ, ಪ್ರಾತರ್+ಕಾಲ=ಪ್ರಾತಃಕಾಲ, ಪಯಸ್+ಪಾನ=ಪಯಃಪಾನ ಇತ್ಯಾದಿ. ನಮಸ್ಕಾರ, ತಿರಸ್ಕಾರ, ಪುರಸ್ಕಾರ, ಈ ಶಬ್ದಗಳಿಗೆ ವಿಸರ್ಗ ಬಾರದು.

5. ರಕಾರಕ್ಕೆ ಚ ಛ ಕಾರಗಳು ಪರವಾದರೆ ಷ ಕಾರವೂ, ತ ಥ ಕಾರಗಳು ಪರವಾದರೆ ಸ ಕಾರವೂ ಬರುವದು. ಉದಾ: ಪುನರ್+ಚರಣೆ=ಪುನಶ್ಚರಣೆ, ಪುನರ್+ಟಂಕವು=ಪುನಷ್ಟಂಕವು, ಪ್ರಾತರ್+ತೂರ್ಣವು=ಪ್ರಾತಸ್ತೂರ್ಣವು ಇತ್ಯಾದಿ.

6. ವರ್ಗೀಯ ವ್ಯಂಜನಗಳಿಗೆ ಅನುನಾಸಿಕವು ಪರವಾದಲ್ಲಿ ಪೂರ್ವಪದಾಂತ ವ್ಯಂಜನದ ವರ್ಗದ ಅನುನಾಸಿಕವು ಬರುವದು. ಉದಾ: ಸತ್+ಮಾರ್ಗ=ಸನ್ಮಾರ್ಗ, ಅಪ್+ಮಯ=ಅಮ್ಮಯ, ಷಟ್+ನಕ್ಷತ್ರ=ಷಣ್ಣಕ್ಷತ್ರ ಇತ್ಯಾದಿ.

7. ವರ್ಗ ಪ್ರಥಮ, ದ್ವಿತೀಯ, ಚತುರ್ಥಗಳಿಗೆ ಅಘೋಷಾಕ್ಷರಗಳನ್ನುಳಿದ ವರ್ಣಗಳು ಪರವಾದರೆ ವರ್ಗದ ತೃತೀಯಾಕ್ಷರ ಬರುವದು. ಉದಾ: ಸತ್+ಆನಂದ=ಸದಾನಂದ, ವಾಕ್+ದಾನ=ವಾಗ್ದಾನ, ಷಟ್+ವೈರಿ=ಷಡ್ವೈರಿ ಇತ್ಯಾದಿ.

8. ವರ್ಗದ ಪ್ರಥಮಾಕ್ಷರಗಳಿಗೆ ಚರ್ ಎಂಬ ಹೆಸರು. ವರ್ಗದ ಪ್ರಥಮ ದ್ವಿತೀಯ, ತೃತೀಯ, ಚತುರ್ಥಾಕ್ಷರಗಳಿಗೆ ಅಘೋಷಾಕ್ಷರಗಳು ಪರವಾಗಲು ವರ್ಗದ ಪ್ರಥಮಾಕ್ಷರ ಬರುವದು. ಉದಾ: ಷಡ್+ಚಕ್ರ=ಷಟ್ಚಕ್ರ, ಷಟ್+ಕರ್ಮ=ಷಟ್ಕರ್ಮ, ತದ್+ತಾದೃಶ=ತತ್ತಾದೃಶ.

9. ಅನುನಾಸಿಕವನ್ನುಳಿದ ವರ್ಗೀಯಾಕ್ಷರಗಳಿಗೆ ಶ ಕಾರವು ಪರವಾದಲ್ಲಿ ಛ ಕಾರಾದೇಶ ಬರುವದು; ಇದಕ್ಕೆ ಛತ್ವ ಸಂಧಿ ಎಂಬ ಹೆಸರು. ಉದಾ: ತತ್+ಶಿವ=ತಚ್ಛಿವ, ತಿರ್ಯಕ್+ಶರೀರ=ತಿರ್ಯಕ್ಛರೀರ ಇತ್ಯಾದಿ.

10. ಉತ್ ಶಬ್ದಕ್ಕೆ ಪರವಾದ ಸ್ಥಾ ಮತ್ತು ಸ್ತಂಭು ಎಂಬ ಧಾತುಗಳ ಸ ಕಾರಕ್ಕೆ ಪೂರ್ವಪದಾಂತ ತ ಕಾರವೇ ಆದೇಶವಾಗಿ ಬರುವದು. ಉದಾ: ಉತ್+ಸ್ಥಾನ=ಉತ್ಥಾನ, ಉತ್+ಸ್ತಂಭನ=ಉತ್ತಂಭನ ಇತ್ಯಾದಿ.

11. ಅನುನಾಸಿಕವನ್ನುಳಿದ ವರ್ಗೀಯಾಕ್ಷರಗಳಿಗೆ ಹ ಕಾರವು ಪರವಾಗಲು ಆ ಹ ಕಾರಕ್ಕೆ ಪೂರ್ವಪದಾಂತ ವ್ಯಂಜನದ ವರ್ಗದ ತೃತೀಯಾಕ್ಷರ ಬರುವದು. ಉದಾ: ಜ್ವಲತ್+ಹೀರ=ಜ್ವಲದ್ಧೀರ ಇತ್ಯಾದಿ.

12. ತ ವರ್ಗಕ್ಕೆ ಲ ಕಾರ ಪರವಾದರೆ ಲ ಕಾರವೇ ಬರುವದು. ಉದಾ: ತತ್+ಲಿಖಿತ=ತಲ್ಲಿಖಿತ ಇತ್ಯಾದಿ.

13. ಅ ಕಾರಕ್ಕೆ ಪರವಾದ ಸ ಕಾರಕ್ಕೆ ಅ ಕಾರವು ಪರವಾದ್ದಲ್ಲಿ ಆ ಎರಡು ಅ ಕಾರಕ್ಕೂ ನಡುವಿನ ಸ ಕಾರಕ್ಕೂ ಒಂದು ಓ ಕಾರಾದೇಶ ಬರುವದು. ಉದಾ: ವಯಸ್+ಅಧಿಕ=ವಯೋಧಿಕ, ಶಿರಸ್+ಅಗ್ರ=ಶಿರೋಗ್ರ ಇತ್ಯಾದಿ.

14. ಅ ಕಾರಕ್ಕೆ ಪರವಾದ ಸ ಕಾರಕ್ಕೆ ಘೋಷಾಕ್ಷರಗಳು ಪರವಾದರೆ ಅ ಕಾರ ಸ ಕಾರಗಳೆರಡಕ್ಕೂ ಒಂದು ಓ ಕಾರದೇಶ ಬರುವದು. ಉದಾ: ತಮಸ್+ಗುಣ=ತಮೋಗುಣ ಇತ್ಯಾದಿ.

15. ನಾಮಿಗಳಿಗೆ ಪರವಾದ ಸ ಕಾರಕ್ಕೆ ಸ್ವರಗಳಾಗಲಿ ಘೋಷಾಕ್ಷರಗಳಾಗಲಿ ಪರವಾದ್ದಲ್ಲಿ ರೇಫ ಬರುವದು. ಉದಾ: ಹವಿಸ್+ಆಜ್ಯ=ಹವಿರಾಜ್ಯ ಧನುಸ್+ವಿದ್ಯೆ=ಧನುರ್ವಿದ್ಯೆ ಇತ್ಯಾದಿ.

ಹಿಂದೆ 8 ನೇ ಅಂಕೆಯಲ್ಲಿ ಇ ಉ—ಇವುಗಳು ನಾಮಿಗಳೆಂದು ಹೇಳಿರುತ್ತದೆ; ಆ ಎರಡು ಸ್ವರಗಳು ಮಾತ್ರವಲ್ಲ, ಅ ಆ ಕಾರಗಳನ್ನುಳಿದ ಸ್ವರಗಳೆಲ್ಲಾ ನಾಮಿಗಳೆಂದು ತಿಳಿಯ ತಕ್ಕದ್ದು.

## ಲೇಖನಾಂತರ ಚಿನ್ಹೆಗಳ ವಿವರ.

44. ಕನ್ನಡದಲ್ಲಿ ವಾಕ್ಯಗಳನ್ನೂ ಅರ್ಥವಿಶೇಷಗಳನ್ನೂ ತಿಳಿಯುವ ಹಾಗೆ ಯಾವಸಾದರೂ ಸೌಂಜ್ಞೆಗಳನ್ನು ಉಪಯೋಗಿಸುತ್ತಿದ್ದಿಲ್ಲ; ಈಗ ಇಂಗ್ಲಿಷ್ ಮುಂತಾದ ಪುಸ್ತಕಗಳಲ್ಲಿ ಇರುವಂತೆ ಲೇಖನಾಂತರ ಚಿನ್ಹೆಗಳನ್ನು ಉಪಯೋಗಿಸುತ್ತಾರೆ; ಆ ಚಿನ್ಹೆಗಳು ಮತ್ತು ಅವುಗಳ ಅರ್ಥ ವಿಶೇಷಗಳು ಯಾವವಂದರೆ:—

, ಅಲ್ಪವಿರಾಮ ; ಅರ್ಧವಿರಾಮ . ಪೂರ್ಣವಿರಾಮ ? ಪ್ರಶ್ನಾ ಚಿನ್ಹೆ ! ಸಂಬೋಧನ ಚಿನ್ಹೆ : ಸೂಚಕ ಚಿನ್ಹೆ + ಸಂಬಂಧಕ ಚಿನ್ಹೆ = ಸಮಾನಾರ್ಥಕ ಚಿನ್ಹೆ " " ವಿಶೇಷಕ ಚಿನ್ಹೆ ( ) ಆವರಣ ಚಿನ್ಹೆ * † ಪಂಸ ಪಾದಗಳು.

## ಶಬ್ದಲಕ್ಷಣ.

45. ಅರ್ಥ ಕೊಡುವ ಹಾಗಿನ ಅಕ್ಷರ ಅಥವಾ ಅಕ್ಷರಗಳೇ ಶಬ್ದವು. ಆದರೆ ಅಂಥ ಶಬ್ದಗಳ ಮೂಲಾಕ್ಷರಗಳು ಮಾತ್ರ ಇದ್ದರೆ ಪ್ರಕೃತಿಯೆಂತಲೂ, ಪ್ರಕೃತಿಯ ಮೇಲೆ ಸೇರುವ ವರ್ಣಗಳಿಗೆ ಪ್ರತ್ಯಯವೆಂತಲೂ, ಪ್ರತ್ಯಯವುಳ್ಳ ಶಬ್ದಕ್ಕೆ ಪದವೆಂತಲೂ, ಹೇಳುತ್ತಾರೆ. ಉದಾ: ಮರ+ಉ ಮರವು. ಇದರಲ್ಲಿ "ಮರ" ಪ್ರಕೃತಿ, "ಉ" ಪ್ರತ್ಯಯ, "ಮರವು" ಪದ.

46. ಶಬ್ದಗಳಲ್ಲಿ ಜಾತಿಭೇದ, ರೂಪಭೇದ ಮತ್ತು ವಾಗರ್ಥಭೇದವೆಂಬ ಮೂರು ಭೇದ ಉಂಟು.

## I. ಜಾತಿಭೇದಗಳು.

47. ಶಬ್ದಜಾತಿಯಲ್ಲಿ ದೇಶ್ಯ, ಅನ್ಯದೇಶ್ಯ, ಗ್ರಾಮ್ಯ, ತತ್ಸಮ ಮತ್ತು ತದ್ಭವವೆಂಬ 5 ವಿಧವುಂಟು. ಹ್ಯಾಗಂದರೆ:—

1. ಶುದ್ಧ ಕನ್ನಡ ಶಬ್ದವು ದೇಶ್ಯವೆಂದೆನ್ನಿಸುವದು. ಉದಾ: ಕಣ್ಣು, ಮನೆ, ಬಾಯಿ, ಕೈ, ಮರ ಇತ್ಯಾದಿ.

2. ಇಂಗ್ಲಿಷ್ ಮುಂತಾದ ಬೇರೆ ದೇಶಗಳ ಭಾಷೆಯು ಅನ್ಯದೇಶ್ಯವೆನ್ನಿಸುವದು. ಉದಾ: ಹುಕುಂ, ಕೋರ್ಟು, ಅಪೀಲು ಇತ್ಯಾದಿ.

3. ವ್ಯಾಕರಣ ವಿರುದ್ಧವಾದ ಕನ್ನಡ ಶಬ್ದವು ಗ್ರಾಮ್ಯವೆನ್ನಿಸುವದು. ಉದಾ: ಮ್ಯಾಗೆ (ಮೇಲೆ) ಮಾಡ್ಕ್ಯಾಸಿ (ಮಾಡಿಕೊಂಡು) ಅಬ್ಬೆ (ಅವ್ವ) ಇತ್ಯಾದಿ.

4. ವಿಕಾರವಾಗದೆ ಕನ್ನಡ ಭಾಷೆಯಲ್ಲಿ ಸೇರುವ ಸಂಸ್ಕೃತ ಶಬ್ದವು ತತ್ಸಮವೆನ್ನಿಸುವದು. ಉದಾ: ವಿಚಾರ, ನ್ಯಾಯ, ಶೂರ, ಗುರು ಇತ್ಯಾದಿ. ಕನ್ನಡ ಪ್ರತ್ಯಯಗಳನ್ನು ಕೂಡಿಸುವದಕ್ಕಾಗಿ ಕೆಲವು ಸಂಸ್ಕೃತ ಶಬ್ದಗಳ ಅಂತಾಕ್ಷರಕ್ಕೆ ವಿಕೃತಿ ಬಂದದೆ. ಹ್ಯಾಗಂದರೆ:—ಅಂಗನಾ—ಅಂಗನೆ, ಲಕ್ಷ್ಮೀ—ಲಕ್ಷ್ಮಿ, ವಧೂ—ವಧು ಜಗತ್—ಜಗತ್ತು, ಮನಸ್—ಮನಸ್ಸು ಅಥವಾ ಮನ ಇತ್ಯಾದಿ.

5. ವಿಕಾರವಾಗಿ ಕನ್ನಡ ಭಾಷೆಯಲ್ಲಿ ಸೇರುವ ಸಂಸ್ಕೃತ ಶಬ್ದವು ತದ್ಭವ ಅಥವಾ ಅಪಭ್ರಂಶವೆನ್ನಿಸುವದು. ಉದಾ: ಜೋಗಿ (ಯೋಗಿ)

ಕೀರ (ಕ್ಷೀರ) ಸಂಜೆ (ಸಂಧ್ಯಾ) ಇತ್ಯಾದಿ. ಈ ಪ್ರಕಾರ ತದ್ಭವವಾಗಲಿಕ್ಕೆ ಉಂಟಾದ ಮುಖ್ಯ ವಿಧಿಗಳು ಯಾವವೆಂದರೆ:—1. ಪರುಷಾಕ್ಷರಕ್ಕೆ ಸಸರಳಾಕ್ಷರ, 2. ಮಹಾಪ್ರಾಣಕ್ಕೆ ಅಲ್ಪಪ್ರಾಣ, 3. ಡ ಕಾರಕ್ಕೆ ಳ ಕಾರ 4. ಪ ಫ ಕಾರಗಳಿಗೆ ಹ ಕಾರ, 5. ಪ ಬ ಮ ಕಾರಗಳಿಗೆ ವ ಕಾರ, 6. ಯ ಕಾರಕ್ಕೆ ಜ ಕಾರ, 7. ಲ ಕಾರಕ್ಕೆ ಳ ಕಾರ, 8. ವ ಕಾರಕ್ಕೆ ಬ ಕಾರ, 9. ಶ ಷ ಕಾರಗಳಿಗೆ ಸ ಕಾರ ಕೂಡ ಉಪಯೋಗಿಸಿದರು; ಮತ್ತು ಒತ್ತಕ್ಷರಗಳಲ್ಲಿ I. ಎರಡು ವ್ಯಂಜನಗಳಲ್ಲಿ ಒಂದು ಲೋಪವಾಯಿತು. II. ಎರಡು ವ್ಯಂಜನಗಳನ್ನು ಒಂದರ ದ್ವಿತ್ವಕ್ಕೆ ವಿಕರಿಸಿದರು. III. ಎರಡು ವ್ಯಂಜನಗಳ ನಡುವಿನಲ್ಲಿ ಒಂದು ಸ್ವರ ಸೇರಿತು ಉದಾ: 1. ಕಾಕ—ಕಾಗೆ, ಅಟವಿ—ಅಡವಿ, 2. ಖಂಡ—ಕಂಡ, ಘಂಟಾ—ಗಂಟೆ, 3. ದಾಡಿಮ—ದಾಳಿಂಬ, ನಾಡಿ—ನಾಳ, 4. ಪಕ್ಷಿ—ಹಕ್ಕಿ, ಪಣ—ಹಣ, ಫಲಕ—ಹಲಗೆ, ಫಣೆ—ಹಣೆ 5. ದೀಪಿಕಾ—ದೀವಿಗೆ, ಕಬಳ—ಕವಳ, ಯಾಮ—ಜಾವ, 6. ಯೋಗಿ—ಜೋಗಿ, 7. ಕಮಲ—ಕಮಳ, 8. ವಾಲ—ಬಾಲ, ವೇಗ—ಬೇಗ, 9. ಶುಂಠಿ—ಸುಂಟಿ, ದೋಷ—ದೋಸ. I. ಕ್ಷಾರ—ಕಾರ, ಸ್ಫಟಿಕ—ಪಟಿಕ, II. ವರ್ಷ—ವರುಷ, ಅಬ್ಜ—ಅಬುಜ, III. ರಾಕ್ಷಸ—ರಕ್ಕಸ, ಸ್ವರ್ಗ—ಸಗ್ಗ, ನಿದ್ರಾ—ನಿದ್ದೆ. ಕೆಲವು ತತ್ಸಮ ಶಬ್ದಗಳು ನಾನಾ ತರವಾಗಿ ವಿಕಾರ ಹೊಂದಿಯವೆ. ಹ್ಯಾಗಂದರೆ:—ಗ್ರಂಥಿ—ಗಂಟು, ಉತ್ಕಟ—ಉಗ್ಗಡ, ಶಿಲ್ಪಿಕ—ಚೆಪ್ಪಿಗ, ವೃದ್ಧಿ—ಬಡ್ಡಿ, ವಾಪಿ—ಬಾವಿ, ಉದ್ಯೋಗ—ಉಜ್ಜುಗ, ವಿದ್ಯೆ—ಬಿಜ್ಜೆ, ಸ್ಮಶಾನ—ಮಸಣ, ಕುರಂಟ—ಗೊರಂಟೆ, ಕುಠಾರ—ಕೊಡಲಿ, ಮರೀಚ—ಮೆಣಸು, ಕ್ರಕಚ—ಗರಗಸ, ಕಾಷ್ಟ—ಕಷ್ಟಿಗೆ, ವಿಜ್ಞಾಪನ—ಬಿನ್ನಹ, ಮೃಗ—ಮಿಗ, ವೃಷಭ—ಬಸವ ಇತ್ಯಾದಿ.

## II ರೂಪಭೇದಗಳು.

48. ಶಬ್ದಗಳ ರೂಪದಲ್ಲಿ ಸಿದ್ಧ ಶಬ್ದ, ವ್ಯುತ್ಪನ್ನ ಶಬ್ದ ಮತ್ತು ಸಮಾಸ ಶಬ್ದವೆಂಬ 3 ವಿಧವುಂಟು.

1. ಬೇರೆ ಶಬ್ದಗಳಿಂದ ಹುಟ್ಟದ ಶಬ್ದಗಳು ಸಿದ್ಧ ಶಬ್ದಗಳಾಗಿರುತ್ತವೆ. ಉದಾ: ನದಿ, ತಾಳು, ದನ ಇತ್ಯಾದಿ.

2. ಬೇರೆ ಶಬ್ದಗಳಿಂದ ಹುಟ್ಟಿದ ಶಬ್ದಗಳು ವ್ಯುತ್ಪನ್ನ ಶಬ್ದಗಳಾಗಿರುತ್ತವೆ. ಇವುಗಳಲ್ಲಿ ಕೃತ್ಪ್ರತ್ಯಯು ಸೇರಿ ಹುಟ್ಟಿದವುಗಳು ಕೃದಂತಗಳೆಂತಲೂ, ತದ್ಧಿತ ಪ್ರತ್ಯಯು ಸೇರಿ ಹುಟ್ಟಿದವುಗಳು ತದ್ಧಿತಾಂತಗಳೆಂತಲೂ, 2 ವಿಧ.

## I ಕೃದಂತಗಳು.

49. ಕ್ರಿಯಾಪದಗಳ ಮೇಲೆ ಕೃತ್ಪ್ರತ್ಯಯುಗಳನ್ನು ಹತ್ತಿಸುವದರಿಂದ ಕೃದಂತಗಳು ಆಗುತ್ತವೆ. ಈ ಪ್ರಕಾರ ಹುಟ್ಟಿದ ಕೃದಂತಗಳಲ್ಲಿ ಕೆಲವು ಭಾವವಾಚಕ ಕ್ರಿಯಾನಾಮಗಳು, ಕೆಲವು ಹೊಸ ಧಾತುಗಳು ಸಹಾ ಆಗಿರುತ್ತವೆ. ಹ್ಯಾಗಂದರೆ:—

| ಕೃತ್ಪ್ರತ್ಯಯುಗಳು. | ಕೃದಂತ ಭಾವವಾಚಕ ಕ್ರಿಯಾನಾಮಗಳು. | ಕೃದಂತ ಹೊಸ ಧಾತುಗಳು. |
|---|---|---|
| ಹು, ಪು, ಸು, ಕು, ಗು, ವು, ತ, ತೆ, ಇಕೆ, ಇಗೆ, ಇಸು, ಮೆ, ಟ, ಣ, ವ, ಅಣಿಗೆ, ಇತ ಇತ್ಯಾದಿ. | ಹೊಳೆ—ಹೊಳಪು, ತಿರಿ—ತಿರಿಪು, ನೆನೆ—ನೆನಪು, ಬಿರಿ—ಬಿರಿಕು, ಮುನಿ—ಮುನಿಸು, ಕಳು—ಕಳವು, ಸಾ—ಸಾವು, ಮೇ—ಮೇವು, ಕಾ—ಕಾವು, ಕಾಪು, ಕೀ—ಕೀವು, ನೋ—ನೋವು. ಸೆಳೆ—ಸೆಳವು, ಕುಣಿ—ಕುಣಿತ, ನುಡಿ—ನುಡಿತ, ಹೊಡೆ—ಹೊಡೆತ, ಸುಗಿ—ಸುಗಿತ, ಅರಿ—ಅರಿತ, ಅರಿವು; ಮುರಿ—ಮುರಿತ, ಮರೆ—ಮರವು, ಮುಗಿ—ಮುಗಿತ, ಉರಿ—ಉರಿತ, ನಡೆ—ನಡತೆ, ಬರೆ—ಬರವಣಿಗೆ, ಗೇಯು—ಗೇಯಿಕೆ, ಆಳು—ಆಳಿಕೆ, ಇರು—ಇರುವಿಕೆ, ಇರ್ಕೆ, ಅಂಜು—ಅಂಜಿಕೆ, ಉಡು—ಉಡಿಗೆ, ನೆಡು—ನೆಡಿಗೆ,, ತೊಡು—ತೊಡಿಗೆ, ಅಡು—ಅಡಿಗೆ, ಮೂಡು—ಮೂಡಿಗೆ, ಕೂಡು—ಕೂಟ, ಮಾಡು—ಮಾಟ, ಓಡು—ಓಟ, ಆಡು—ಆಟ, ಕಾಡು—ಕಾಟ, ಉಣ್ಣು—ಊಟ, ಒಪ್ಪು—ಒಪ್ಪಿತ, ಒಪ್ಪಣ, ಬಲಿ—ಬಲ್ಮೆ, ಒಲಿ—ಒಲ್ಮೆ, ತಾಳು—ತಾಳ್ಮೆ, ಇತ್ಯಾದಿಗಳು. | ತಿರಿ—ತಿರಿಹು, ತಿರಿಗು, ಅಡೆ—ಅಡಗು, ಅರಿ—ಅರುಹು; ಬೆಳ್—ಬೆಳಗು, ನೆನೆ—ನೆನಸು, ನನೆ—ನನೆಸು, ಮರೆ—ಮರಸು, ಉಳ್—ಉಳುಹು, ಕೊಡು—ಕೊಡಿಸು ಇತ್ಯಾದಿ. |

## ತದ್ಧಿತಾಂತಗಳು.

50. ಕ್ರಿಯಾಪದಗಳನ್ನು ಕಳದು ಉಳಿದ ಶಬ್ದಗಳ ಮೇಲೆ ತದ್ಧಿತ ಪ್ರತ್ಯಯಗಳನ್ನು ಹತ್ತಿಸುವದರಿಂದ ತದ್ಧಿತಾಂತಗಳು ಆಗುವವು. ತದ್ಧಿತ ಪ್ರತ್ಯಯಗಳಲ್ಲಿ ಭಾವಪ್ರತ್ಯಯ, ಅನ್ವರ್ಥಪ್ರತ್ಯಯ ಮತ್ತು ಸ್ತ್ರೀಪ್ರತ್ಯಯವೆಂಬ 3 ವಿಧದ ಪ್ರತ್ಯಯಗಳು ಇರುತ್ತವೆ; ಭಾವ ಪ್ರತ್ಯಯಗಳಿಂದ ಭಾವವಾಚಕ ನಾಮಗಳೂ, ಅನ್ವರ್ಥ ಪ್ರತ್ಯಯಗಳಿಂದ ಅನ್ವರ್ಥ ನಾಮಗಳೂ, ಸ್ತ್ರೀಪ್ರತ್ಯಯಗಳಿಂದ ಸ್ತ್ರೀವಾಚಕ ನಾಮಗಳು ಕೂಡ ಆಗುವವು. ಹ್ಯಾಗಂದರೆ:—

| ಪ್ರತ್ಯಯಗಳು. | | ಅವುಗಳಿಂದ ಉಂಟಾದ ನಾಮಗಳು. |
|---|---|---|
| ಭಾವ. | ತ್ವ, ತನ, ಇಕೆ. | ಶಾಂತತ್ವ, ಧೊರೆತನ, ಬ್ರಾಹ್ಮಣಿಕೆ ಇತ್ಯಾದಿ. |
| ಅನ್ವರ್ಥ. | ಆರ, ಕಾರ, ಗಾರ, ಆಳಿ, ಇಗ, ವಂತ, ಅಣಿಗ, ಅಡಿಗ, ಇಷ್ಟ, ಸ್ಥ ಇತ್ಯಾದಿ. | ಉಪ್ಪಾರ, ಓಲೆಕಾರ, ಮೋಸಗಾರ, ಬಣಗಾರ, ಜೂದಾಳಿ, ಮದ್ದಳಿಗ, ಕಬ್ಬಿಗ, ಗಾಣಿಗ, ಬುದ್ಧಿವಂತ, ಲಂಚವಣಿಗ, ಮದುವಣಿಗ, ದೇವಡಿಗ, ಕೋಪಿಷ್ಟ, ಮೌನಸ್ಥ ಇತ್ಯಾದಿ. |
| ಸ್ತ್ರೀ | ಇ, ತಿ, ಇತಿ, ಗಿತಿ, ಎ, ಳು ಇತ್ಯಾದಿ. | ಹುಡುಗಿ (ಹುಡುಗ) ಮಾಲೆಗಾರತಿ (ಮಾಲೆಗಾರ) ಅಗಸತಿ (ಅಗಸ) ಒಕ್ಕಲಿಗಿತಿ (ಒಕ್ಕಲಿಗ) ಮದುವಣಿಗಿತಿ (ಮದುವಣಿಗ) ಜಾಣೆ (ಜಾಣ) ಮಗಳು (ಮಗ) ಇತ್ಯಾದಿ. |

## III. ಸಮಾಸಶಬ್ದಗಳು.

51. ಒಂದೇ ಅರ್ಥವುಳ್ಳ ಒಂದು ಪದವಾಗುವ ಹಾಗೆ ಕೂಡಿಕೊಂಡಾದ 2 ಅಥವಾ ಹೆಚ್ಚು ಶಬ್ದಗಳ ಕೂಟಕ್ಕೆ ಸಮಾಸ ಶಬ್ದವೆಂಬ ಹೆಸರು. ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಸಮಾಸ ಪದಗಳಲ್ಲಿ ದ್ವಂದ್ವ, ಬಹು

ವ್ರೀಹಿ, ಕರ್ಮಧಾರಯ, ತತ್ಪುರುಷ, ದ್ವಿಗು, ಅವ್ಯಯೀಭಾವವೆಂಬ 6 ವಿಧ ಉಂಟು. ಹ್ಯಾಗಂದರೆ:—

1. ಎರಡು ಅಥವಾ ಹೆಚ್ಚು ಪದಗಳುಳ್ಳದ್ದಾಗಿ ಕಡೇ ಪದಕ್ಕೆ ಬಹುವಚನ ಪ್ರತ್ಯಯು ಸೇರುವ ಸಮಾಸಕ್ಕೆ ದ್ವಂದ್ವ ಸಮಾಸವೆಂಬ ಹೆಸರು. ಉದಾ: (ಸಂಸ್ಕೃತ) ಮಾತಾಪಿತೃಗಳು, ದೇವದಾನವಮಾನವರು, ವೃಕ್ಷವಲ್ಲಿತೃಣಕಾಷ್ಠಗಳು, ಮೃಗಪಕ್ಷಿಕ್ರಿಮಿಕೀಟಗಳು, ಕಾಮಕ್ರೋಧಲೋಭಗಳು ಇತ್ಯಾದಿ. (ಕನ್ನಡ) ತಲೆಕೈಕಾಲುಗಳು, ಮನೆಹಟ್ಟಿಕೊಟ್ಟಿಗೆಗಳು, ನಾಯಿಬೆಕ್ಕುಇಲಿಗಳು, ಕತ್ತಿಚೂರಿಸೂಜಿಗಳು ಇತ್ಯಾದಿ.

2. ಎರಡು ಅಥವಾ ಹೆಚ್ಚು ಪದಗಳುಳ್ಳದ್ದಾಗಿ, ಯಾವದೊಂದು ವಸ್ತುವಾಗಲೀ ಗುಣವಾಗಲೀ ಉಳ್ಳದ್ದಾಗಿದೆ ಎಂಬ ಅರ್ಥ ಕೊಡುವ ಸಮಾಸಕ್ಕೆ ಬಹುವ್ರೀಹಿ ಸಮಾಸವೆಂಬ ಹೆಸರು. ಉದಾ: (ಸಂಸ್ಕೃತ) ಮಹಾಬಲನು, ತ್ರಿಲೋಚನನು, ಕಮಲನಾಭನು, ಸುಗುಣನು, (ಕನ್ನಡ) ಮುಕ್ಕಣ್ಣನು, ಕುಂಟಕಾಲನು, ಹೊಕ್ಕುಳುಹೂವನು, ಕೈಮುರುಕನು, ಹರಕುಮೂಗನು, ಸಿಡುಬೋಳನು, ಎಸಳುಗಣ್ಣನು ಇತ್ಯಾದಿ.

ಇದಲ್ಲದೆ ಒಂದೇ ಅರ್ಥವುಳ್ಳ ಎರಡು ಪದಗಳು ಕಲಹಾರ್ಥವುಳ್ಳವುಗಳಾಗಿ ಸಮಾಸವಾಗುವದಕ್ಕೆ ವ್ಯತಿಹಾರ ಬಹುವ್ರೀಹಿ ಎಂಬ ಹೆಸರು. ಉದಾ: (ಸಂಸ್ಕೃತ) ಗದಾಗದಿ, ಕೇಶಾಕೇಶಿ, ಖಡ್ಗಾಖಡ್ಗಿ, (ಕನ್ನಡ) ಮುಷ್ಟಾಮುಷ್ಟಿ, ಹಾನಾಹಾನಿ, ಬಾಡಾಬಾಡಿ ಇತ್ಯಾದಿ.

3. ಪೂರ್ವಪದವು ಪರ ಪದವನ್ನು ವಿಶೇಷಿಸುವ ವಿಶೇಷಣ ಅಥವಾ ಉಪವಿಶೇಷಣವಾಗಿದ್ದರೆ ಕರ್ಮಧಾರಯ ಸಮಾಸವೆನ್ನಿಸುವದು. ಉದಾ: (ಸಂಸ್ಕೃತ) ನೀಲೋತ್ಪಲ, ಅಲ್ಪಬುದ್ಧಿ, ಘೋರಶೋಕ, ಕೃಷ್ಣರಾಜ, ನಾರದಮುನಿ. (ಕನ್ನಡ) ಕೆಂದಾವರೆ, ತೆಂಗಾಳಿ, ಎಳೆಬಿಸಿಲು, ತಿಮ್ಮಗೌಡ, ಕೃಷ್ಣಸೆಟ್ಟಿ ಇತ್ಯಾದಿ.

4. ಪೂರ್ವ ಪದವು ವಿಭಕ್ತ್ಯರ್ಥವುಳ್ಳ ವಿಶೇಷಣವಾಗಿದ್ದರೆ ತತ್ಪುರುಷ ಸಮಾಸವೆನ್ನಿಸುವದು, ಪೂರ್ವ ಪದಕ್ಕೆ ವಿಭಕ್ತಿಪ್ರತ್ಯಯವಿದ್ದರೆ ಅಲುಕ್ಸಮಾಸವೆನ್ನುತ್ತಾರೆ. ತತ್ಪುರುಷ ಸಮಾಸದಲ್ಲಿ 7 ವಿಭಕ್ತಿಗಳ ಅರ್ಥಕ್ಕನುಸಾರವಾಗಿ, ಪ್ರಥಮಾ ತತ್ಪುರುಷ, ದ್ವಿತೀಯಾ ತತ್ಪುರುಷ ಇತ್ಯಾದಿ

7 ವಿಧ ಉಂಟು. ಉದಾ: (ಸಂಸ್ಕೃತ) ಪ್ರ. ತ. ಊರ್ಧ್ವಮೂಲ, ದ್ವಿ. ತ. ದೈತ್ಯಮರ್ದನ, ತೃ. ತ. ರಥಘೋಷ, ಚ. ತ. ದೇವಬಲಿ, ಪ. ತ. ರಾಜಭೀತಿ, ಷ. ತ. ದೇವದೂತ, ಸ. ತ. ಆಕಾಶಚರ. (ಕನ್ನಡ) ಪ್ರ. ತ. ಇದಕ್ಕೆ ಉದಾಹರಣೆ ಇಲ್ಲ, ದ್ವಿ. ತ. ಕಲ್ಲುಕುಟಿಗ, ತೃ. ತ. ಕತ್ತಿಘಾಯ, ಚ. ತ. ತೇರುಮರ, ಪ. ತ. ಹುಲಿಯಳ್ಕು, ಷ. ತ. ಕುರಿಮರಿ, ಸ. ತ. ಕೆಲಸಜಾಣನು. ಅಲುಕ್ಸಮಾಸಕ್ಕೆ (ಸಂಸ್ಕೃತ) ಜಲೇಶಯನ, ಖೇಚರ (ಕನ್ನಡು) ಮಾವಿನಮರ, ಬೇಲದಹಣ್ಣು ಇತ್ಯಾದಿ.

5. ಪೂರ್ವ ಪದವು ಸಂಖ್ಯಾವಾಚಕ ವಿಶೇಷಣವಾಗಿದ್ದರೆ ದ್ವಿಗು ಸಮಾಸವೆನ್ನಿಸುವದು. ಉದಾ: (ಸಂಸ್ಕೃತ) ಏಕವಚನ, ತ್ರಿಲಿಂಗ, ಪಂಚಲೋಹ. (ಕನ್ನಡ) ಓರ್ತಲೆ, ಇಕ್ಕಟ್ಟು, ಮುನ್ನೂರು, ಐಮೊಲೆ ಇತ್ಯಾದಿ.

6. ಪೂರ್ವ ಪದವು ಅವ್ಯಯವಾಗಿದ್ದರೆ ಅವ್ಯಯೀಭಾವ ಸಮಾಸವೆನ್ನಿಸುವದು. ಇದರಲ್ಲಿ ಅವ್ಯಯವು ಪೂರ್ವ ಪದವಾದರೆ ಅವ್ಯಯ ಪೂರ್ವ ಅವ್ಯಯೀಭಾವವೆಂತಲೂ, ಪರಪದವು ಅವ್ಯಯವಾಗಿದ್ದರೆ ನಾಮಪೂರ್ವಅವ್ಯಯೀಭಾವವೆಂತ ಕೂಡ 2 ವಿಧ ಉಂಟು. ಉದಾ: (ಸಂಸ್ಕೃತ) ಉಪನದಿ; ಯಥಾಕಾಲ, ಪ್ರತಿದಿನ; ದಿನಂಪ್ರತಿ, ಮಾಸಂಪ್ರತಿ. (ಕನ್ನಡು) ಮುಂಗಡೆ, ಹಿಂಗಾಲು, ಮೇಲ್ಗಟ್ಟು ಇತ್ಯಾದಿ.

52. ಸಮಾಸವಾಗುವ ಎರಡು ಪದಗಳಲ್ಲಿ ಒಂದು ಸಂಸ್ಕೃತ ಮತ್ತೊಂದು ಕನ್ನಡ ಆಗಿದ್ದರೆ ಅರಿ ಸಮಾಸವೆಂಬ ಹೆಸರು. ಇವುಗಳು ಕೃತಿಗೆ ಅನುಕೂಲವಾಗುವಂತೆ ಕವಿಗಳಿಂದ ರಚಿಸಲ್ಪಟ್ಟವುಗಳಾಗಿರ ಬೇಕಲ್ಲದೆ ಅನ್ಯಥಾ ಕೂಡದು. ಉದಾ: ಅರಸುಪುತ್ರ, ತಾಂಬ್ರಕೊಡೆ, ತುರಗದಳ, ಕೈಲಾಘವ, ಮುಖದಾವರೆ ಇತ್ಯಾದಿ.

53. ಕನ್ನಡದಲ್ಲಿ ಪೂರ್ವ ಪದವು ಷಷ್ಠಿವಿಭಕ್ತಿ ಪ್ರತ್ಯಯವುಳ್ಳದಾದ ಅಲುಕ್ಸಮಾಸವೆಂತಲೂ, ಷಷ್ಠಿ ವಿಭಕ್ತಿ ಪ್ರತ್ಯಯವಿಲ್ಲದ ಲುಕ್ಸಮಾಸವೆಂತಲೂ, ಪೂರ್ವ ಪದವು ವಿಶೇಷಣವಾಗಿರುವ ಗಮಕ ಸಮಾಸವೆಂತಲೂ, ಪರಪದವಾದ ಕ್ರಿಯಾಪದಕ್ಕೆ ಅರ್ಥವ್ಯಕ್ತಿ ಕೊಡುವ ನಾಮಪದವು ಪೂರ್ವ ಪದವಾಗುಳ್ಳ ಕ್ರಿಯಾಸಮಾಸವೆಂತಲೂ, 4 ವಿಧ ಉಂಟೆಂದು ಕೆಲ

ಪರು ಅನ್ನುವರು. ಉದಾ: ಅಲುಕ್ಸಮಾಸಕ್ಕೆ—ಮಾವಿನ ಹಣ್ಣು, ಬೇವಿನ ಮರ. ಲುಕ್ಸಮಾಸಕ್ಕೆ—ಲಿಂಬೆ ಹಣ್ಣು, ಕುರಿಮರಿ. ಗಮಕಸಮಾಸಕ್ಕೆ ಒಳ್ಳೆ ಹುಡುಗ, ಸತ್ತ ಬೆಕ್ಕು, ಒಂದನೆ ಪುಸ್ತಕ. ಕ್ರಿಯಾಸಮಾಸಕ್ಕೆ ಕೆಲಸಮಾಡು, ಭಯಗೊಳ್ಳು, ದುಃಖಪಡು.

54. ಇದಲ್ಲದೆ ಒಂದು ಶಬ್ದವನ್ನಾಗಲೀ ವಾಕ್ಯವನ್ನಾಗಲೀ ಎರಡು ಅಥವಾ ಅನೇಕಾವರ್ತಿ ಹೇಳಿದರೆ ಅದಕ್ಕೆ ದ್ವಿರ್ವಚನವೆಂಬ ಹೆಸರು. ಉದಾ: ಉಂಡುಂಡು, ನುಡಿನುಡಿದು, ಮೆಲ್ಲಮೆಲ್ಲನೆ, ಕೆಳಕೆಳಗೆ, ಮನೆಮನೆಗೆ, ಕಟ್ಟಕಡೆ, ನಟ್ಟನಡು, ಬಟ್ಟಬರಿದು, ತುಟ್ಟತುದಿ, ಒದ್ದೆಯಾದನೊದ್ದೆಯಾದನು, ಉಣ್ಣುತ್ತಾ ಉಣ್ಣುತ್ತಾನೆ ಇತ್ಯಾದಿ. ಮತ್ತು ಒಂದೇ ಶಬ್ದವನ್ನು ಎರಡು ಸಾರಿ ಉಪಯೋಗಿಸುವಲ್ಲಿ ಒಂದರ ಹಾಗೆ ಮತ್ತೊಂದು ಎಂಬ ಅರ್ಥ ಬರುವ ಹಾಗೆ ಆ ಎರಡನೇ ಶಬ್ದಕ್ಕೆ ಆದಿಯಾದ ಹ್ರಸ್ವಾಕ್ಷರಕ್ಕೆ ಗಿ ಕಾರವೂ ದೀರ್ಘಾಕ್ಷರಕ್ಕೆ ಗೀ ಕಾರವೂ ಆದೇಶ ಬಂದು ಆಗುವ ದ್ವಿರ್ವಚನಕ್ಕೆ ತಜ್ಜಾತಿ ದ್ವಿರ್ವಚನವೆಂಬ ಹೆಸರು. ಉದಾ: ಎಣ್ಣೆಗಿಣ್ಣೆ, ಹಣ್ಣುಗಿಣ್ಣು, ಆಟಗೀಟ ಇತ್ಯಾದಿ. ದ್ವಿರ್ವಚನಗಳನ್ನು ಕೆಲವರು ಸಮಾಸಗಳಲ್ಲಿ ಸೇರಿಸುತ್ತಾರೆ.

## III ವಾಗರ್ಥಭೇದವು.

55. ವಾಗರ್ಥ ಭೇದವನ್ನು ನೋಡಿದರೆ, ಶಬ್ದಗಳಲ್ಲಿ ನಾಮಪದ, ಸರ್ವನಾಮ, ಕ್ರಿಯಾಪದ, ವಿಶೇಷಣಪದ, ಮತ್ತು ಅವ್ಯಯಶಬ್ದವೆಂಬ 5 ವಿಧ ಉಂಟು; ಆದರೆ ನೆಟ್ಟಗೆ ವಿಚಾರಿಸಿದರೆ ನಾಮಪದ, ಕ್ರಿಯಾಪದ ಮತ್ತು ಅವ್ಯಯ ಪದವೆಂಬ ಮೂರೇ ವಿಧ.

## I ನಾಮಪದವು.

56. ಜೀವಾಜೀವ ಚರಾಚರ ವಸ್ತುಗಳ ಹೆಸರುಗಳನ್ನೂ ಅವುಗಳ ಸ್ಥಿತಿ ಗುಣ ಕ್ರಿಯಾದಿಗಳ ಹೆಸರುಗಳನ್ನೂ ಹೇಳುವ ಪದಗಳಿಗೆ ನಾಮಪದಗಳೆಂಬ ಹೆಸರು. ಉದಾ: ಮರ, ಕಾಗೆ, ನದಿ, ಕೃಷ್ಣ, ಮಂಗಲೂರು, ಗೋದಾವರಿ, ಶ್ರೇಷ್ಠ, ಹೊಳೆಸು ಇತ್ಯಾದಿ.

57. ನಾಮಪದಗಳಲ್ಲಿ ವಸ್ತುಗಳನ್ನು ಹೇಳುವಂಥವು ವಸ್ತುವಾಚಕ ನಾಮಪದಗಳೆಂತಲೂ, ವಸ್ತುಗಳ ಸ್ಥಿತಿ, ಗುಣ ಕ್ರಿಯಾದಿಗಳ ಹೆಸರುಗಳನ್ನು ಹೇಳುವಂಥವು ಭಾವವಾಚಕ ನಾಮಪದಗಳೆಂತಲೂ, 2 ವಿಧ. ವಸ್ತುವಾಚಕ ನಾಮಪದಗಳಲ್ಲಿ, ವಸ್ತುಗಳನ್ನು ತಿಳಿಸುವದಕ್ಕೆ ಅವುಗಳಿಗೆ ಕಾಲಾಂತರ ಪ್ರಯೋಗದಿಂದ ರೂಢಿಯಾಗಿ ಬಂದ ಹೆಸರುಗಳಿಗೆ ರೂಢನಾಮಗಳೆಂದೂ, ರೂಢನಾಮಗಳಲ್ಲಿ ಪ್ರತಿ ವಸ್ತುವಿಗೆ ಇಟ್ಟ ಹೆಸರುಗಳಿಗೆ ಅಂಕಿತನಾಮಗಳೆಂದೂ, ಮನುಷ್ಯರ ಉದ್ಯೋಗ, ಗುಣ, ಕ್ರಿಯಾದಿಗಳಿಗೆ ಸಂಬಂಧಿಸಿದ ಹೆಸರುಗಳಿಗೆ ಅನ್ವರ್ಥ ನಾಮಗಳೆಂದೂ ಕೂಡ ಹೇಳುತ್ತಾರೆ. ಉದಾ: ವಸ್ತುವಾಚಕದಲ್ಲಿ ರೂಢನಾಮಗಳು—ಕಾಗೆ, ನದಿ, ಮರ, ಗಿಡ, ಮನುಷ್ಯ. ಅಂಕಿತನಾಮಗಳು—ಗೊವಿಂದ, ರಾಮ, ಮಂಗಲೂರು, ಗೋದಾವರಿ. ಅನ್ವರ್ಥನಾಮಗಳು—ವ್ಯಾಪಾರಸ್ಥ, ಕೋಪಿಷ್ಟ, ಬೋಧಕ, ಜ್ಞಾನಿ. ಭಾವವಾಚಕದಲ್ಲಿ ಸ್ಥಿತಿವಾಚಕಗಳು—ಬಡತನ, ಯವ್ವನ, ಸಮಾಧಾನ. ಗುಣವಾಚಕಗಳು—ಗರ್ವ, ಕ್ರೋಧ, ಲೋಭ. ಕ್ರಿಯಾವಾಚಕಗಳು—ನಡತೆ, ನೋಟ, ನಂಬಿಕೆ, ಮುನಿಸು ಇತ್ಯಾದಿ. ರೂಢನಾಮಗಳಲ್ಲಿ ಕೆಲವು ವಸ್ತುಗಳ ಕೂಟಕ್ಕೆ ಬರುವ ಹೆಸರು ಸಂಘವಾಚಕನಾಮವೆನ್ನಿಸುವದು. ಉದಾ: ಪ್ರಜೆ, ಪರಿಶೆ, ಸೈನ್ಯ, ಕೂಟ ಇತ್ಯಾದಿ.

58. ನಾಮಪದಗಳಿಗೆ ಲಿಂಗ, ಸಂಖೆ ಮತ್ತು ವಿಭಕ್ತಿ ಎಂಬ 3 ವಿಧದ ಲಕ್ಷಣಗಳು ಉಂಟು.

## ಲಿಂಗಗಳು.

59. ಪುರುಷರನ್ನು ಹೇಳುವ ಪುಲ್ಲಿಂಗವೆಂತಲೂ, ಸ್ತ್ರೀಯರನ್ನು ಹೇಳುವ ಸ್ತ್ರೀಲಿಂಗವೆಂತಲೂ, ಪುರುಷ ಅಥವಾ ಸ್ತ್ರೀಯಲ್ಲದ ಜ್ಞಾನವಿಲ್ಲದ ವಸ್ತುಗಳನ್ನು ಹೇಳುವ ನಪುಂಸಕ ಲಿಂಗವೆಂತಲೂ, 3 ವಿಧದ ಲಿಂಗಗಳವೆ. ಉದಾ: ಪುಲ್ಲಿಂಗ—ಮನುಷ್ಯ, ಹುಡುಗ, ಬೋಧಕ. ಸ್ತ್ರೀಲಿಂಗ—ಹುಡುಗಿ, ತಾಯಿ, ಬೋಧಕಳು. ನಪುಂಸಕಲಿಂಗ—ಸಿಟ್ಟು, ನಾಯಿ, ಪಕ್ಷಿ ಇತ್ಯಾದಿ.

## ಮೇಲಿನ ಸೂತ್ರಕ್ಕೆ ಅಪವಾದಗಳು.

I. ಸೂರ್ಯ, ಚಂದ್ರ, ಬುಧ, ವೃಷಭ, ವರಾಹ, ಕೂರ್ಮ, ಮತ್ಸ್ಯ ಇವುಗಳನ್ನು ಹೇಳುವ ವಸ್ತುಗಳು ನಪುಂಸಕಲಿಂಗವಾದಾಗ್ಯೂ ಹಿಂದು ಪೂರ್ವಿಕರು ಅವುಗಳಿಗೆ ಪುಲ್ಲಿಂಗ ಕೊಟ್ಟಿದ್ದಾರೆ.

2. ಹೆಂಡತಿ, ತೊತ್ತು, ಸೂಳೆ, ದೇವತೆ, ಆಳು ಮುಂತಾದ ಕೆಲವು ವಸ್ತುಗಳಿಗೆ ಅಸಹ್ಯ ವ್ಯಕ್ತಾರ್ಥದಲ್ಲಿ ನಪುಂಸಕಲಿಂಗ ಕೊಡುತ್ತಾರೆ.

3. ಶಿಶು, ಕೂಸು, ಮಗು, ಇವುಗಳನ್ನು ಹೇಳುವ ವಸ್ತುಗಳು ಮನುಷ್ಯರನ್ನು ಹೇಳದಾಗ್ಯೂ ಅವುಗಳಿಗೆ ಜ್ಞಾನ ಹುಟ್ಟದ ಕಾರಣ ನಿತ್ಯವಾಗಿ ನಪುಂಸಕಲಿಂಗ ಕೊಡುವರು.

4. ಜನವೆಂಬ ಶಬ್ದಕ್ಕೆ ಮೂರು ಲಿಂಗ ಕೂಡ ಬರುವವು. ಉದಾ: ಪುಂಸ್ತ್ರೀಲಿಂಗ—ಜನರು ಬಂದರು. ನಪುಂಸಕಲಿಂಗ—ಬಹು ಜನ ಕೂಡಿತು.

## ಸಂಖೆಗಳು.

60. ಸಂಖ್ಯೆಯಲ್ಲಿ ಒಂದು ವಸ್ತುವನ್ನು ಹೇಳುವ ಏಕವಚನವೆಂತಲೂ, ಒಂದಕ್ಕಿಂತ ಹೆಚ್ಚು ವಸ್ತುಗಳನ್ನು ಹೇಳುವ ಬಹುವಚನವೆಂತಲೂ 2 ವಿಧ. ಉದಾ: ಏಕವಚನ—ನಾಯಿ, ಕುದುರೆ, ಸ್ತ್ರೀ, ಮನುಷ್ಯ. ಬಹುವಚನ—ನಾಯಿಗಳು, ಕುದುರೆಗಳು, ಸ್ತ್ರೀಯರು, ಮನುಷ್ಯರು ಇತ್ಯಾದಿ.

## ಏಕ ಮತ್ತು ಬಹುವಚನಗಳ ವಿವರ.

1. ನಾಮಪದಗಳ ಪ್ರಕೃತಿ ರೂಪಕ್ಕೆ ಏಕವಚನವೇ ಬರುವದು; ಆದರೆ ಏಕವಚನದಲ್ಲಿ ಅಕಾರಾಂತ ಪುರುಷವಾಚಕಗಳಿಗೆ ಅನು ಪ್ರತ್ಯಯವೂ, ಸ್ತ್ರೀವಾಚಕಗಳಿಗೆ ಅಳು ಪ್ರತ್ಯಯವೂ, ಅಕಾರಾಂತ ನಪುಂಸಕಲಿಂಗಕ್ಕೂ ಅಕಾರಾಂತವನ್ನುಳಿದ ಪುಂಸ್ತ್ರೀ ನಪುಂಸಕಲಿಂಗಗಳಿಗೂ ಉ ಪ್ರತ್ಯಯವು ಕೂಡ ಬರುವದು. ಉದಾ: ಪ್ರ. ರೂ. ನಾಯಿ, ಮರ, ಆನೆ, ಕರು. ಅ. ಪು. ಬೋಧಕ—ಬೋಧಕನು. ಅ. ಸ್ತ್ರೀ. ಬೋಧಕಳು, ಅ. ನಪುಂ. ಮರ—ಮರವು. ಬೇರೆ ಸ್ವರಾಂತ ಪುಂಸ್ತ್ರೀ. ನಪುಂ. ಬು

ಷಿ—ಋಷಿಯು, ಗುರು—ಗುರುವು, ಧೊರೆ—ಧೊರೆಯು, ಹುಡುಗಿ—ಹುಡುಗಿಯು, ಮಾತೃ—ಮಾತೃವು, ಕರು—ಕರುವು ಇತ್ಯಾದಿ.

2. ಬಹುವಚನದಲ್ಲಿ ಅಕಾರಾಂತ ಪುಂಸ್ತ್ರೀವಾಚಕಗಳಿಗೆ ಅರು ಪ್ರತ್ಯಯವೂ, ಅಕಾರಾಂತ ನಪುಂಸಕಲಿಂಗಕ್ಕೂ ಅಕಾರಾಂತವನ್ನುಳಿದ ಪುಂಸ್ತ್ರೀ ನಪುಂಸಕಲಿಂಗಗಳಿಗೂ ಗಳು ಪ್ರತ್ಯಯ ಕೂಡ ಬರುವದು. ಉದಾ: ಅ. ಪುಂಸ್ತ್ರೀ. ಬೋಧಕ—ಬೋಧಕರು, ಅ. ನಪುಂ. ಮರ—ಮರಗಳು; ಬೇರೆ ಸ್ವರಾಂತ ಪುಂಸ್ತ್ರೀ ನಪುಂ. ಮುನಿ—ಮುನಿಗಳು, ಕೋತಿ—ಕೋತಿಗಳು, ಧನಿ—ಧನಿಗಳು, ಗುರು—ಗುರುಗಳು, ಹೆಣ್ಣು—ಹೆಣ್ಣುಗಳು, ಕರು—ಕರುಗಳು, ಪಿತೃ—ಪಿತೃಗಳು, ಮಾತೃ—ಮಾತೃಗಳು, ಧೊರೆ—ಧೊರೆಗಳು, ಸೊಸೆ—ಸೊಸೆಗಳು, ಆನೆ—ಆನೆಗಳು ಇತ್ಯಾದಿ.

## ಮೇಲಿನ 1ನೇ ಸೂತ್ರಕ್ಕೆ ಅಪವಾದಗಳು.

ಅಮ್ಮ, ಅವ್ವ, ಅಕ್ಕ ಇವುಗಳು ಸ್ತ್ರೀವಾಚಕಗಳಾದಾಗ್ಯೂ ಇವುಗಳಿಗೆ ಏಕವಚನದಲ್ಲಿ ಅನು ಪ್ರತ್ಯಯವು ಬರುವದು. ಉದಾ: ಅಕ್ಕನು, ಅಮ್ಮನು, ಅವ್ವನು ಇತ್ಯಾದಿ.

## ಮೇಲಿನ 2ನೇ ಸೂತ್ರಕ್ಕೆ ಅಪವಾದಗಳು.

I ಅಪ್ಪ, ಅಮ್ಮ, ಅಕ್ಕ, ಭಾವ, ಮಾವ ಮುಂತಾದ ಅಕಾರಾಂತ ಪುಂಸ್ತ್ರೀ ಬಂಧುವಾಚಕಗಳಿಗೆ ಬಹುವಚನದಲ್ಲಿ ಅರು ಅಲ್ಲ ಂದಿರು ಅಥವಾ ಗಳು ಪ್ರತ್ಯಯ ಬರುವದು. ಉದಾ: ಅಪ್ಪ—ಅಪ್ಪಂದಿರು, ಅಪ್ಪಗಳು; ಮಾವ—ಮಾವಂದಿರು, ಮಾವಗಳು ಇತ್ಯಾದಿ.

II. ಇ ಎ ಕಾರಾಂತ ಪುಂಸ್ತ್ರೀವಾಚಕಗಳಿಗೆ ಬಹುವಚನದಲ್ಲಿ ಗಳು ಮಾತ್ರವಲ್ಲ ಕೆಲವು ಕಡೆಯಲ್ಲಿ ಅರು ಪ್ರತ್ಯಯ ಕೂಡ ಬರುವದು. ಉದಾ: ಸ್ತ್ರೀ—ಸ್ತ್ರೀಯರು, ಅತ್ತೆ—ಅತ್ತೆಯರು, ಹುಡುಗಿ—ಹುಡುಗಿಯರು, ತಂಗಿ—ತಂಗಿಯರು, ಧನಿ—ಧನಿಯರು, ಪೇದೆ—ಪೇದೆಯರು ಇತ್ಯಾದಿ.

III. ಬಹುವಚನದಲ್ಲಿ ಇನ್ನೂ ಅಪವಾದಗಳು ಯಾವವಂದರೆ—ಅರಸು—ಅರಸರು, ಅರಸುಗಳು; ಗಂಡಸು—ಗಂಡಸರು, ಗಂಡಸುಗಳು; ಹೆಂಗಸು—ಹೆಂಗಸರು, ಹೆಂಗಸುಗಳು; ಮಗನು, ಮಗಳು, ಮಗು—ಮಕ್ಕಳು. ಹೆಂಡತಿ—ಹೆಂಡರು, ಹೆಂಡತಿಗಳು, ಹೆಂಡತಿಯರು ಇತ್ಯಾದಿ.

61. ಕೆಲವು ನಾಮಪದಗಳಿಗೆ ಏಕವಚನ ಪ್ರತ್ಯಯಗಳ ಮೇಲೆ ಪೂಜಾರ್ಥದಲ್ಲಿ ಅವರು ಅಥವಾ ಅವರುಗಳು ಎಂಬದನ್ನು ಕೂಡಿಸುತ್ತಾರೆ; ಇಂಥ ರೂಪಗಳನ್ನು ಬಹುವಚನವೆಂದು ತಿಳಕೊಳ್ಳಲಾಗದು. ಉದಾ: ಧೊರೆ—ಧೊರೆಯವರು, ಧೊರೆಯವರುಗಳು; ಅರಸನು— ಅರಸನವರು, ಅರಸನವರುಗಳು; ಅಮ್ಮನು—ಅಮ್ಮನವರು, ಅಮ್ಮನವರುಗಳು; ತಂದೆ—ತಂದೆಯವರು, ತಂದೆಯವರುಗಳು ಇತ್ಯಾದಿ.

## ವಿಭಕ್ತಿಗಳು

62. ವಾಕ್ಯದಲ್ಲಿ ನಾಮಪದಗಳಿಗೆ ಬರುವ ನಾನಾ ಕಾರಕಾರ್ಥಗಳನ್ನು ತೋರಿಸುವದಕ್ಕೆ ಅವುಗಳ ಸ್ವರೂಪಗಳಲ್ಲಿ ಆಗುವ ವಿಕಾರಗಳು ವಿಭಕ್ತಿಗಳೆಂದೆನ್ನಿಸುವವು. ಕನ್ನಡದಲ್ಲಿ ಏಳು ವಿಭಕ್ತಿಗಳುಂಟು, ಅವುಗಳ ಅಂಕಾಸಂಜ್ಞೆಗಳೂ, ಕಾರಕಾರ್ಥಸಂಜ್ಞೆಗಳೂ ಮತ್ತು ಪ್ರತ್ಯಯಗಳೂ ಯಾವವಂದರೆ:—

| ಅಂಕಾ ಸಂಜ್ಞೆ | ಕಾರಕಾರ್ಥಸಂಜ್ಞೆ | ವಿಭಕ್ತಿಪ್ರತ್ಯಯಗಳು | |
|---|---|---|---|
| ಪ್ರಥಮೆ | ಕರ್ತೃ ವಿಭಕ್ತಿ | ಉ. | |
| ಪ್ರಥಮೆ | ಸಂಬೋಧನ | ಎ, ಏ. | |
| ದ್ವಿತೀಯೆ | ಕರ್ಮ ವಿಭಕ್ತಿ | ಅನ್ನು. | |
| ತೃತೀಯೆ | ಕರಣ ವಿಭಕ್ತಿ | ಇಂದ. | |
| ಚತುರ್ಥಿ | ಸಂಪ್ರದಾನ ವಿಭಕ್ತಿ | ಇಗೆ, ಗೆ, ಕ್ಕೆ. | |
| ಪಂಚಮಿ | ಅಪಾದಾನ ವಿಭಕ್ತಿ | ದೆಸೆಯಿಂದ. | |
| ಷಷ್ಠಿ | ಸಂಬಂಧ ವಿಭಕ್ತಿ | ಅ. | |
| ಸಪ್ತಮಿ | ಅಧಿಕರಣ ವಿಭಕ್ತಿ | ಅಲ್ಲಿ. | |

63. ಮೇಲಿನ 7 ವಿಭಕ್ತಿಗಳಲ್ಲಿ ಪ್ರಥಮೆ, ದ್ವಿತೀಯೆ, ತೃತೀಯೆ ಚತುರ್ಥಿ, ಸಪ್ತಮಿ, ಈ 5 ವಿಭಕ್ತಿಗಳು ಕಾರಕ ವಿಭಕ್ತಿಗಳೆಂದೆನ್ನಿಸಿ ಕೊಳ್ಳುತ್ತವೆ. ಇವುಗಳು ಹೇಳುವ ಕಾರಕಾರ್ಥಗಳನ್ನು ಮುಂದೆ ವಾಕ್ಯರಚನೆಯ ಕಾರಕ ಪ್ರಕರಣದಲ್ಲಿ ವಿವರಿಸಿರುತ್ತದೆ. ಸಂಬೋಧನ ವಿಭಕ್ತಿಯು ಕರೆಯುವಲ್ಲಿ ಉಪಯೋಗಿಸಲ್ಪಡುವ ಪ್ರಥಮೆ ವಿಭಕ್ತಿಯೇ ಆಗಿರುತ್ತದೆ. ತೃತೀಯೆ ಮತ್ತು ಪಂಚಮಿ ವಿಭಕ್ತಿಗಳ ಅರ್ಥಕ್ಕೆ ಹೆಚ್ಚು ವ್ಯತ್ಯಾಸ ತೋರದ ಕಾರಣ ಪಂಚಮಿ ವಿಭಕ್ತಿಯನ್ನು ಕೆಲವು ವ್ಯಾಕರಣಗಾರರು ಬಿಟ್ಟು ಬಿಟ್ಟರು. ಷಷ್ಠಿ ಸಂಬಂಧಾರ್ಥಕ ವಿಶೇಷಣವಾಗಿ ಉಪಯೋಗಿಸಲ್ಪಡುವದು.

ವಿಭಕ್ತಿಪ್ರತ್ಯಯಗಳು ನಾಮಪದಗಳಿಗೆ ಸೇರುವಾಗ ಬರುವ ಲೋಪಾಗಮಾದೇಶಗಳ ವಿವರ:—

1. ಅಕಾರಾಂತ ಪುಂಸ್ತ್ರೀವಾಚಕಗಳಿಗೆ ವಿಭಕ್ತಿಪ್ರತ್ಯಯಗಳು ಅನು ಅಳು ಎಂಬ ಅಚ್ಪ್ರತ್ಯಯಗಳ ಮೇಲೆ ಬರುವವು. ಬೇರೆ ಎಲ್ಲಾ ನಾಮಪದಗಳಿಗೆ ಪ್ರಕೃತಿರೂಪದಮೇಲೆಯೇ ಬರುವವು.

2. ಅನು ಅಳು ಎಂಬ ಪ್ರತ್ಯಯಗಳ ಉ ಸ್ವರಕ್ಕೂ ಅನಿತ್ಯ ಉಕಾರಾಂತ ಶಬ್ದಗಳ ಉ ಸ್ವರಕ್ಕೂ ವಿಭಕ್ತಿಪ್ರತ್ಯಯಗಳು ಸೇರುವಾಗ ಲೋಪ ಬರುವದು; ಇ ಎಕಾರಾಂತ ಶಬ್ದಗಳಿಗೆ ಪ್ರತ್ಯಯಗಳು ಸೇರುವಾಗ ನಡುವಿನಲ್ಲಿ ಯಕಾರಾಗಮ ಬರುವದು; ಅಕಾರಾಂತ ನಪುಂಸಕ ಶಬ್ದಗಳ ಮುಂದೆಯೂ ಉ ಊ ಋ ಓ ಕಾರಾಂತ ಶಬ್ದಗಳ ಮುಂದೆಯೂ ಪ್ರತ್ಯಯಗಳು ಸೇರುವಾಗ ಕರ್ತೃಸಂಬೋಧನಕರ್ಮ ವಿಭಕ್ತಿಗಳಲ್ಲಿ ವ ಕಾರಾಗಮವೂ, ತೃತೀಯೆ ಷಷ್ಠಿ ಸಪ್ತಮಿ ವಿಭಕ್ತಿಗಳಲ್ಲಿ ಅ ಕಾರಾಂತ ನಪುಂಸಕ ಲಿಂಗಗಳ ಮುಂದೆ ದ ಕಾರಗಮವೂ, ಉ ಊ ಋ ಓ ಕಾರಗಳ ಮುಂದೆ ವಿನ್ ಆಗಮ ಕೂಡ ಬರುವದು. ಚತುರ್ಥಿ ವಿಭಕ್ತಿಯಲ್ಲಿ ಅ ಇ ಎ ಕಾರಾಂತ ನಪುಂಸಕ ಲಿಂಗಗಳಿಗೆ ಮಾತ್ರ ಆಗಮ ಬಾರದು, ಉ ಊ ಋ ಓ ಕಾರಾಂತಗಳಿಗೆ ವ ಕಾರಾಗಮ ಬರುವದು; ಪಂಚಮಿ ವಿಭಕ್ತಿಯು ಷಷ್ಠಿ ವಿಭಕ್ತಿಯ ಮೇಲೆ ದೆಸೆಯೆಂಬ ನಾಮಪದದ ತೃತೀಯೆ ವಿಭಕ್ತಿ ಕೂಡಿಸುವದರಿಂದ ಆಗುವದು.

3. ಬಹುವಚನದಲ್ಲಿ ವಿಭಕ್ತಿ ಪ್ರತ್ಯಯಗಳು ಬಹುವಚನ ಪ್ರತ್ಯಯ

ಗಳ ಮೇಲೆ ಬರುವವು. ಈ ಎಲ್ಲಾ ಸಂಗತಿಗಳನ್ನು ಈ ಕೆಳಗೆ ಬರೆದ ವಿಭಕ್ತಿರೂಪಮಾಲೆಯಿಂದ ತಿಳಿಯ ತಕ್ಕದ್ದು.

64. ಹಳೆಗನ್ನಡ ವಿಭಕ್ತಿ ಪ್ರತ್ಯಯಗಳು ಯಾವವೆಂದರೆ:—ಪ್ರಥಮೆ.—ಅಂ, ಅಳ್, ಸಂಬೋಧನ—ಎ, ಏ, ದ್ವಿತೀಯೆ—ಅಂ, ತೃತೀಯೆ—ಇಂ (ಇಂದಂ), ಚತುರ್ಥಿ—ಗೆ, ಕೆ, ಇಗೆ, ಪಂಚಮಿ—ಅತ್ತಣಿಂ (ಅತ್ತಣಿಂದಂ), ಷಷ್ಠಿ—ಅ, ಸಪ್ತಮಿ—ಒಳ್. ಈ ಪ್ರತ್ಯಯಗಳು ನಾಮಪದಗಳಿಗೆ ಸೇರುವಾಗ ಬರುವ ಲೋಪಾಗಮಾದಿಗಳ ವಿವರ:—

I. ಅಕಾರಾಂತ ಪುಂಸ್ತ್ರೀವಾಚಕಗಳಿಗೆ ಪ್ರಥಮ ವಿಭಕ್ತಿಪ್ರತ್ಯಯಗಳಾದ ಅಂ, ಅಳ್ ಎಂಬವುಗಳ ಮೇಲೆ ದ್ವಿತಿಯಾದಿ ಎಲ್ಲಾ ಪ್ರತ್ಯಯಗಳು ಸೇರುವವು. ವ್ಯಂಜನಾಂತಗಳಾದ ಮತ್ತು ಅಕಾರವಲ್ಲದೆ ಬೇರೆ ಎಲ್ಲಾ ಸ್ವರಾಂತವಾದ ಪುಂಸ್ತ್ರೀನಪುಂಸಕ ನಾಮಪದಗಳಿಗೆ ಪ್ರಥಮಾದಿ ಎಲ್ಲಾ ವಿಭಕ್ತಿಪ್ರತ್ಯಯಗಳು ಪ್ರಕೃತಿರೂಪದ ಮೇಲೆಯೇ ಸೇರುವವು. ಅಕಾರಾಂತ ನಪುಂಸಕ ಲಿಂಗಕ್ಕೆ ವಿಭಕ್ತಿ ಪ್ರತ್ಯಯವು "ಅಂ" ಆದಾಗ್ಯೂ ದ್ವಿತೀಯಾದಿ ಎಲ್ಲಾ ವಿಭಕ್ತಿ ಪ್ರತ್ಯಯಗಳು ಪ್ರಕೃತಿಯ ಮೇಲೆಯೇ ಬರುವವು.

II. ಅಕಾರಾಂತ ಪುಲ್ಲಿಂಗಗಳಿಗೆ ವಿಭಕ್ತಿಪ್ರತ್ಯಯ ಸೇರುವಾಗ ನಡುವಿನಲ್ಲಿ ನ ಕಾರಾಗಮ ಬರುವದು. ಇ ಎ ಕಾರಾಂತ ಶಬ್ದಗಳಿಗೆ ಹೊಸಗನ್ನಡದಂತೆಯೇ ದ್ವಿತೀಯಾದಿ ಎಲ್ಲಾ ವಿಭಕ್ತಿಗಳಲ್ಲಿ ಯ ಕಾರಾಗಮವೇ ಬರುವದು. ಪ್ರಥಮವಿಭಕ್ತಿಯಲ್ಲಿ ಅ ಕಾರಾಂತವನ್ನುಳಿದ ಎಲ್ಲಾ ಸ್ವರಾಂತಗಳಿಗೆ ಪ್ರಕೃತಿಯೇ ಉಪಯೋಗಿಸಲ್ಪಡುವದು. ಉ ಊ ಋ ಓ ಕಾರಾಂತಗಳಿಗೆ ಸಂಬೋಧನ ಮತ್ತು ದ್ವಿತೀಯ ವಿಭಕ್ತಿಗಳಲ್ಲಿ ವ ಕಾರಾಗಮವೂ, ತೃತೀಯಾದಿ ವಿಭಕ್ತಿಗಳಲ್ಲಿ ವಿನ್ ಆಗಮವೂ, ಬರುವದು. ಅಕಾರಾಂತ ನಪುಂಸಕ ಲಿಂಗಗಳಿಗೆ ಪ್ರಥಮ, ಚತುರ್ಥಿಗಳಲ್ಲಿ ಆಗಮವಿಲ್ಲ; ಸಂಬೋಧನ, ದ್ವಿತೀಯ ವಿಭಕ್ತಿಗಳಲ್ಲಿ ವಕಾರಾಗಮವೂ, ಬೇರೆ ಎಲ್ಲಾ ವಿಭಕ್ತಿಗಳಲ್ಲಿ ದ ಕಾರಾಗಮ ಕೂಡ ಬರುವದು. ಮರ ಶಬ್ದಕ್ಕೆ ಮಾತ್ರ ಅಕಾರಾಂತ ಪುಲ್ಲಿಂಗದಂತೆಯೇ ಆಗಮಗಳು ಬರುವವು. ಈ ಎಲ್ಲಾ ವಿವರವನ್ನು ಮುಂದೆ ಹಳೆಗನ್ನಡ ವಿಭಕ್ತಿರೂಪಮಾಲೆಯಿಂದ ತಿಳಿಯ ತಕ್ಕದ್ದು.

## ಹೊಸಗನ್ನಡ ನಾಮಪದಗಳ

| | ವಿಭಕ್ತಿ ಸಂಜ್ಞೆಗಳು | ವಿಭಕ್ತಿ ಪ್ರತ್ಯಯಗಳು | ಅಕಾರಾಂತ | |
|---|---|---|---|---|
| | | | ಪುಲ್ಲಿಂಗ | ಸ್ತ್ರೀಲಿಂಗ |
| | | | ಬೋಧಕ | |
| ಏಕವಚನ | ಪ್ರ. ಕರ್ತೃವಿಭಕ್ತಿ | ಉ | ಬೋಧಕನು | ಬೋಧಕಳು |
| | ಪ್ರ. ಸಂಬೋಧನ | ಎ (ಏ) | ಬೋಧಕನೆ (ನೇ) | ಬೋಧಕಳೆ (ಳೇ) |
| | ದ್ವಿ. ಕರ್ಮವಿಭಕ್ತಿ | ಅನ್ನು | ಬೋಧಕನನ್ನು | ಬೋಧಕಳನ್ನು |
| | ತೃ. ಕರಣವಿಭಕ್ತಿ | ಇಂದ | ಬೋಧಕನಿಂದ | ಬೋಧಕಳಿಂದ |
| | ಚ. ಸಂಪ್ರದಾನ ವಿ. | ಇಗೆ, ಗೆ, ಕ್ಕೆ | ಬೋಧಕನಿಗೆ | ಬೋಧಕಳಿಗೆ |
| | ಪ. ಅಪಾದಾನ ,, | ದೆಸೆಯಿಂದ | ಬೋಧಕನ ದೆಸೆಯಿಂದ | ಬೋಧಕಳ ದೆಸೆಯಿಂದ |
| | ಷ. ಸಂಬಂಧ ,, | ಅ | ಬೋಧಕನ | ಬೋಧಕಳ |
| | ಸ. ಅಧಿಕರಣ ,, | ಅಲ್ಲಿ | ಬೋಧಕನಲ್ಲಿ | ಬೋಧಕಳಲ್ಲಿ |
| ಬಹುವಚನ | ಪ್ರ. ಕರ್ತೃವಿಭಕ್ತಿ | ಉ | ಬೋಧಕರು | |
| | ಪ್ರ. ಸಂಬೋಧನ | ಎ (ಏ) | ಬೋಧಕರೆ (ರೇ) | |
| | ದ್ವಿ. ಕರ್ಮವಿಭಕ್ತಿ | ಅನ್ನು | ಬೋಧಕರನ್ನು | |
| | ತೃ. ಕರಣವಿಭಕ್ತಿ | ಇಂದ | ಬೋಧಕರಿಂದ | |
| | ಚ. ಸಂಪ್ರದಾನ ವಿ. | ಇಗೆ, ಗೆ, ಕ್ಕೆ | ಬೋಧಕರಿಗೆ | |
| | ಪ. ಅಪಾದಾನ ,, | ದೆಸೆಯಿಂದ | ಬೋಧಕರ ದೆಸೆಯಿಂದ | |
| | ಷ. ಸಂಬಂಧ ,, | ಅ | ಬೋಧಕರ | |
| | ಸ. ಅಧಿಕರಣ ,, | ಅಲ್ಲಿ | ಬೋಧಕರಲ್ಲಿ | |

## ವಿಭಕ್ತಿರೂಪಮಾಲೆ.

| ಗಳು. ನಪುಂಸಕ ಲಿಂಗ | ಇ, ಎ, ಐ ಕಾರಾಂತಗಳು. ಪು. ಸ್ತ್ರೀ. ನಪುಂ. | ಉ, ಊ, ಋ ಕಾರಾಂತಗಳು. ಪು. ಸ್ತ್ರೀ. ನಪುಂ. | ಅನಿತ್ಯ ಉ ಕಾರಾಂತ ಪು. ಸ್ತ್ರೀ. ನಪುಂ. |
|---|---|---|---|
| ಮರ. | ಮುನಿ. | ಗುರು. | ಕಲ್ಲು. |
| ಮರವು | ಮುನಿಯು | ಗುರುವು | ಕಲ್ಲು |
| ಮರವೆ (ವೇ) | ಮುನಿಯೆ (ಯೇ) | ಗುರುವೆ (ವೇ) | ಕಲ್ಲೆ, ಕಲ್ಲೇ |
| ಮರವನ್ನು | ಮುನಿಯನ್ನು | ಗುರುವನ್ನು | ಕಲ್ಲನ್ನು |
| ಮರದಿಂದ | ಮುನಿಯಿಂದ | ಗುರುವಿನಿಂದ | ಕಲ್ಲಿನಿಂದ, ಕಲ್ಲಿಂದ |
| ಮರಕ್ಕೆ | ಮುನಿಗೆ | ಗುರುವಿಗೆ | ಕಲ್ಲಿಗೆ |
| ಮರದ ದೆಸೆ[ಯಿಂದ | ಮುನಿಯ ದೆಸೆ[ಯಿಂದ | ಗುರುವಿನ ದೆಸೆ[ಯಿಂದ | ಕಲ್ಲಿನ (ಕಲ್ಲ) ದೆಸೆ[ಯಿಂದ |
| ಮರದ | ಮುನಿಯ | ಗುರುವಿನ | ಕಲ್ಲಿನ, ಕಲ್ಲ |
| ಮರದಲ್ಲಿ | ಮುನಿಯಲ್ಲಿ | ಗುರುವಿನಲ್ಲಿ | ಕಲ್ಲಿನಲ್ಲಿ, ಕಲ್ಲಲ್ಲಿ |
| ಮರಗಳು | ಮುನಿಗಳು | ಗುರುಗಳು | ಕಲ್ಲುಗಳು |
| ಮರಗಳೆ (ಳೇ) | ಮುನಿಗಳೆ (ಳೇ) | ಗುರುಗಳೆ (ಳೇ) | ಕಲ್ಲುಗಳೆ, (ಳೇ) |
| ಮರಗಳನ್ನು | ಮುನಿಗಳನ್ನು | ಗುರುಗಳನ್ನು | ಕಲ್ಲುಗಳನ್ನು |
| ಮರಗಳಿಂದ | ಮುನಿಗಳಿಂದ | ಗುರುಗಳಿಂದ | ಕಲ್ಲುಗಳಿಂದ |
| ಮರಗಳಿಗೆ | ಮುನಿಗಳಿಗೆ | ಗುರುಗಳಿಗೆ | ಕಲ್ಲುಗಳಿಗೆ |
| ಮರಗಳ ದೆಸೆ[ಯಿಂದ | ಮುನಿಗಳ ದೆಸೆ[ಯಿಂದ | ಗುರುಗಳ ದೆಸೆ[ಯಿಂದ | ಕಲ್ಲುಗಳ ದೆಸೆ[ಯಿಂದ |
| ಮರಗಳ | ಮುನಿಗಳ | ಗುರುಗಳ | ಕಲ್ಲುಗಳ |
| ಮರಗಳಲ್ಲಿ | ಮುನಿಗಳಲ್ಲಿ | ಗುರುಗಳಲ್ಲಿ | ಕಲ್ಲುಗಳಲ್ಲಿ |

ಮೇಲೆ ವಿಭಕ್ತಿಮಾಲೆಯಲ್ಲಿ ತೋರುವ ರೂಪಗಳಲ್ಲದೆ ಆಯಾ ವಿಭಕ್ತಿಗಳಿಗೋಸ್ಕರ ಉಪಯೋಗಿಸಲ್ಪಡುವ ಬೇರೆ ರೂಪಗಳು ಯಾವವಂದರೆ:—

1. ಏಕವಚನದಲ್ಲಿ ಪ್ರಥಮೆ ರೂಪದ ಬದಲಾಗಿ ಪ್ರಕೃತಿ ರೂಪವನ್ನು ಪ್ರಯೋಗಿಸುತ್ತಾರೆ. ಉದಾ: ಹುಡಗ ಬಂದನು, ಮರ ಬಿತ್ತು ಇತ್ಯಾದಿ.

2. ಸಂಬೋಧನದಲ್ಲಿಯೂ ಪ್ರಕೃತಿರೂಪ ಉಪಯೋಗಿಸಲ್ಪಡುತ್ತದೆ. ಆದರೆ ಪ್ರಕೃತಿಯ ಅಂತಸ್ವರಕ್ಕೆ ಹೆಚ್ಚಾಗಿ ದೀರ್ಘ ಕೊಡುತ್ತಾರೆ. ಬಹುವಚನದಲ್ಲಿ ಹಳೆಗನ್ನಡ ಪ್ರಯೋಗದಿಂದ ಇರಾ ಪ್ರತ್ಯಯವನ್ನು ಕೂಡಿಸುವದುಂಟು. ಉದಾ: ಎಲೇ ಹುಡುಗ, ಎಲೇ ಹುಡುಗಾ, ಹುಡುಗರಿರಾ ಇತ್ಯಾದಿ.

3. ದ್ವಿತೀಯೆರೂಪಕ್ಕೆ ಪ್ರತಿಯಾಗಿ ನಪುಂಸಕ ಅಕಾರಾಂತ ಇ ಎ ಕಾರಾಂತ ಅನಿತ್ಯ ಉಕಾರಾಂತ ಶಬ್ದಗಳ ಪ್ರಕೃತಿ ರೂಪವು ಉಪಯೋಗಿಸಲ್ಪಡುತ್ತದೆ; ಪ್ರಕೃತಿಯ ಅಂತಸ್ವರಕ್ಕೆ ದೀರ್ಘಕೊಡುವದೂ ಉಂಟು; ಅ ಪ್ರತ್ಯಯವುಳ್ಳ ಅಭೇದನ ದ್ವಿತೀಯೆ ಎಂಬ ರೂಪವನ್ನು ಕಾವ್ಯಗಳಲ್ಲಿ ಹೆಚ್ಚಾಗಿ ಪ್ರಯೋಗಿಸುತ್ತಾರೆ; ಇಂಥ ರೂಪದ ಬದಲಿಗೆ ಅನ್ನ ಎಂಬ ಪ್ರತ್ಯಯವನ್ನು ಕೂಡಿಸುವ ಸಾಧಾರಣ ಪ್ರಯೋಗ ಉಂಟು. ಉದಾ. ಪ್ರಕೃತಿಗೆ—ಮರ ಕಡಿ, ಕುರಿ ಕೊಲ್ಲು, ಗೋಡೆ ಹಾಕು, ಪ್ರಕೃತಿಯ ಅಂತಸ್ವರ ದೀರ್ಘಕ್ಕೆ—ಮರಾ ಕಡಿ, ಹಟಾ ಮಾಡು; ಅಭೇದನ ದ್ವಿತೀಯೆಗೆ—ಮರವ ಕಡಿ, ಹುಡುಗನ ಕರೆ, ಸಾಧಾರಣ ಪ್ರಯೋಗಕ್ಕೆ—ಸೇವಕನ್ನ ಕರೆ, ಮರವನ್ನು ಕಡಿ ಇತ್ಯಾದಿ.

4. ಹಳೆಗನ್ನಡ ಪ್ರಯೋಗದಿಂದ ತೃತೀಯಾರ್ಥದಲ್ಲಿ ಸಪ್ತಮಿ ವಿಭಕ್ತಿಯು ಹೆಚ್ಚಾಗಿ ಉಪಯೋಗಿಸಲ್ಪಡುವದು. ಉದಾ: ತೋಪದಲಿ ಬಂದನು. ಬೆರಳ್ಕೊಳ್ ಬರೆದನು, ಕರದಿ ಪಿಡಿದನು ಇತ್ಯಾದಿ.

5. ದ್ವಿತೀಯೆ ವಿಭಕ್ತಿಗೋಸ್ಕರ ಪ್ರಯೋಗಿಸಲ್ಪಡುವ ಪ್ರಕೃತಿರೂಪಗಳು ಷಷ್ಠಿ ವಿಭಕ್ತಿಗೂ ಪ್ರಯೋಗಿಸಲ್ಪಡುವವು; ಮತ್ತು ಅ ಕಾರಾಂತವನ್ನುಳ್ಳವ ಪ್ರಕೃತಿಗಳಿಗೆ ಆ ವಿಭಕ್ತಿಯಲ್ಲಿ ಬರುವ ಹಾಗೆಯೇ ಅಂತಸ್ವರಕ್ಕೆ ದೀರ್ಘವೂ ಬರುವದು; ಆದರೆ ಅನಿತ್ಯ ಉಕಾರಾಂತಕ್ಕೆ ಮಾತ್ರ ಅ

ಸ್ವರಾದೇಶ ಬರುವದು. ಉದಾ: ಮರಗಾಲು, ಕುರಿಗೊರಳು (ಕುರೀಕೊ ರಳು) ಕುದುರೆಲಾಯ (ಕುದುರೇಲಾಯ) ಊರುಗುಬ್ಬಿ (ಊರಗುಬ್ಬಿ) ಇತ್ಯಾದಿ.

6. ಸಪ್ತಮಿ ವಿಭಕ್ತಿಯ ಪ್ರತ್ಯಯವಾದ ಅಲ್ಲಿ ಎಂಬದಕ್ಕೆ ಪ್ರತಿಯಾಗಿ ಹಿಂದೆ 64ನೇ ಅಂಕೆಯಲ್ಲಿ ಹೇಳಿದ ಒಳ್ ಪ್ರತ್ಯಯವೂ, ನಪುಂಸಕ ಅ ಕಾರಾಂತಗಳ ಮೇಲೆ ದಿ ಪ್ರತ್ಯಯವೂ ಹಳೆಗನ್ನಡ ಪ್ರಯೋಗದಿಂದ ಬರುವವು. ಗ್ರಾಮ್ಯ ಪ್ರಯೋಗದಿಂದ ಆಗೆ ಪ್ರತ್ಯಯ ಬರುವದು. ಉದಾ: ಸೇವಕನೊಳ್, ಮನೆಯೊಳ್, ಮರದಿ, ಕರದಿ, ಮರದಾಗೆ, ಕೈಯಾಗೆ ಇತ್ಯಾದಿ. ಅಲ್ಲಿ ಎಂಬ ಪ್ರತ್ಯಯಕ್ಕೆ ತೃತೀಯೆ, ಚತುರ್ಥಿ ಮತ್ತು ಷಷ್ಠಿ ವಿಭಕ್ತಿಗಳ ಪ್ರತ್ಯಯಗಳು ಸೇರುವದು ಕನ್ನಡದಲ್ಲಿ ಬಹಳ ಉಂಟು. ಉದಾ: ಮನೆಯಲ್ಲಿಂದ, ಹುಡುಗನಲ್ಲಿಗೆ, ಮರದಲ್ಲಿಯ ಇತ್ಯಾದಿ.

ಹೊಸಗನ್ನಡ ವಿಭಕ್ತಿಮಾಲೆಗೂ, ಹಳೆಗನ್ನಡ ವಿಭಕ್ತಿಮಾಲೆಗೂ, ಬಹಳ ವ್ಯತ್ಯಾಸ ಉಂಟು ಹ್ಯಾಗಂದರೆ:—

## ಹಳೆಗನ್ನಡು ವಿಭಕ್ತಿ

| | ವಿಭಕ್ತಿ ಸಂಜ್ಞೆಗಳು | ಅಕಾರಾಂತ | |
|---|---|---|---|
| | | ಪುಲ್ಲಿಂಗ | ಸ್ತ್ರೀಲಿಂಗ |
| | | ಭೋಧಕ. | |
| ಏಕವಚನ. | ಪ್ರ. ಕರ್ತೃವಿಭಕ್ತಿ | ಬೋಧಕಂ | ಬೋಧಕಳ್ |
| | ಪ್ರ. ಸಂಬೋಧನ | ಬೋಧಕ, ಬೋಧಕಾ, [ಬೋಧಕನೆ | ಬೋಧಕಳೆ |
| | ದ್ವಿ. ಕರ್ಮವಿಭಕ್ತಿ | ಬೋಧಕನಂ | ಬೋಧಕಳಂ |
| | ತೃ. ಕರಣವಿಭಕ್ತಿ | ಬೋಧಕನಿಂ, ನಿಂದಂ, [ನಿಂದೆ | ಬೋಧಕಳಿಂ, ಳಿಂದಂ, [ಳಿಂದೆ |
| | ಚ. ಸಂಪ್ರದಾನ ವಿ. | ಬೋಧಕಂಗೆ, (ಗೆ) | ಬೋಧಕಳಿಂಗೆ, ಳ್ಗೆ |
| | ಪ. ಅಪಾದಾನ ವಿ. | ಬೋಧಕನತ್ತಣಿಂ, [ನತ್ತಣಿಂದಂ | ಬೋಧಕಳತ್ತಣಿಂ, [ಳತ್ತಣಿಂದಂ |
| | ಷ. ಸಂಬಂಧ ವಿ. | ಬೋಧಕನ | ಬೋಧಕಳ |
| | ಸ. ಅಧಿಕರಣ ವಿ. | ಬೋಧಕನೊಳ್ | ಬೋಧಕಳೊಳ್ |
| ಬಹುವಚನ. | ಪ್ರ. ಕರ್ತೃವಿಭಕ್ತಿ | ಬೋಧಕರ್ | |
| | ಪ್ರ. ಸಂಬೋಧನ | ಬೋಧಕರಿರಾ | |
| | ದ್ವಿ. ಕರ್ಮವಿಭಕ್ತಿ | ಬೋಧಕರಂ | |
| | ತೃ. ಕರಣವಿಭಕ್ತಿ | ಬೋಧಕರಿಂ, ರಿಂದಂ, (ರಿಂದೆ) | |
| | ಚ. ಸಂಪ್ರದಾನ ವಿ. | ಬೋಧಕರಿಂಗೆ, (ಗೆ) | |
| | ಪ. ಅಪಾದಾನ ವಿ. | ಬೋಧಕರತ್ತಣಿಂ, ಣಿಂದಂ | |
| | ಷ. ಸಂಬಂಧ ವಿ. | ಬೋಧಕರ | |
| | ಸ. ಅಧಿಕರಣ ವಿ. | ಬೋಧಕರೊಳ್ | |

## ರೂ ಪ ಮಾ ಲೆ.

| ಗಳು. ನಪುಂಸಕ ಲಿಂಗ. | ಇ, ಎ, ಐ ಕಾರಾಂತಗಳು. ಪು. ಸ್ತ್ರೀ. ನಪುಂ. | ಉ, ಊ, ಋ ಕಾರಂತಗಳು. ಪು. ಸ್ತ್ರೀ. ನಪುಂ. | ವ್ಯಂಜನಾಂತಗಳು. ಪು. ಸ್ತ್ರೀ. ನಪುಂ. |
|---|---|---|---|
| ಮರ. | ಮುನಿ. | ಗುರು. | ಕಲ್. |
| ಮರಂ | ಮುನಿ | ಗುರು | ಕಲ್ |
| ಮರ, ಮರಾ, [ಮರವೆ | ಮುನಿ, ಮುನೀ, [ಮುನಿಯೆ | ಗುರು, ಗುರೂ, [ಗುರುವೆ | ಕಲ್, ಕಲ್ಲೆ |
| ಮರವಂ | ಮುನಿಯಂ | ಗುರುವಂ | ಕಲ್ಲಂ |
| ಮರದಿಂ, ದಿಂ [ದಂ, ದಿಂದೆ | ಮುನಿಯಿಂ, ಯಿಂ [ದಂ, ಯಿಂದೆ | ಗುರುವಿಂ, ವಿಂದಂ, [ವಿಂದೆ | ಕಲ್ಲಿಂ, ಕಲ್ಲಿಂದಂ, [ಕಲ್ಲಿಂದೆ |
| ಮರಕ್ಕೆ | ಮುನಿಗೆ | ಗುರುಗೆ (ವಿಂಗೆ) | ಕಲ್ಲಿಂಗೆ, ಕಲ್ಗೆ |
| ಮರದತ್ತಣಿಂ, [ಣಿಂದಂ | ಮುನಿಯತ್ತಣಿಂ, [ಣಿಂದಂ | ಗುರುವತ್ತಣಿಂ, [ಣಿಂದಂ | ಕಲ್ಲತ್ತಣಿಂ, [ಣಿಂದಂ |
| ಮರದ | ಮುನಿಯ | ಗುರುವಿನ | ಕಲ್ಲ |
| ಮರದೋಳ್ | ಮುನಿಯೊಳ್ | ಗುರುವಿನೊಳ್ | ಕಲ್ಲೊಳ್ |
| ಮರಗಳ್ | ಮುನಿಗಳ್ | ಗುರುಗಳ್ | ಕಲ್ಗಳ್ |
| ಮರಗಳಿರಾ | ಮುನಿಗಳಿರಾ | ಗುರುಗಳಿರಾ | ಕಲ್ಗಳಿರಾ |
| ಮರಗಳಂ | ಮುನಿಗಳಂ | ಗುರ್ರುಗಳಂ | ಕಲ್ಗಳಂ |
| ಮರಗಳಿಂ, ಳಿಂ [ದಂ, ಳಿಂದೆ | ಮುನಿಗಳಿಂ, ಳಿಂ [ದಂ, ಳಿಂದೆ | ಗುರುಗಳಿಂ, ಳಿಂದಂ, [ಳಿಂದೆ | ಕಲ್ಗಳಿಂ, ಳಿಂದಂ, [ಳಿಂದೆ |
| ಮರಗಳ್ಗೆ | ಮುನಿಗಳ್ಗೆ | ಗುರುಗಳ್ಗೆ | ಕಲ್ಗಳ್ಗೆ |
| ಮರಗಳತ್ತ [ಣಿಂ, ಣಿಂದಂ | ಮುನಿಗಳತ್ತಣಿಂ, [ಣಿಂದಂ | ಗುರುಗಳತ್ತಣಿಂ, [ಣಿಂದಂ | ಕಲ್ಗಳತ್ತಣಿಂ, [ಣಿಂದಂ |
| ಮರಗಳ | ಮುನಿಗಳ | ಗುರುಗಳ | ಕಲ್ಗಳ |
| ಮರಗಳೊಳ್ | ಮುನಿಗಳೊಳ್ | ಗುರುಗಳೊಳ್ | ಕಲ್ಗಳೊಳ್ |

## II. ಸರ್ವನಾಮವು.

65. ನಾಮಪದಗಳ ಸ್ಥಳದಲ್ಲಿ ಅವುಗಳಿಗೆ ಪ್ರತಿಯಾಗಿ ಪ್ರಯೋಗಿಸಲ್ಪಡುವ ಶಬ್ದಗಳು ಸರ್ವನಾಮಗಳೆನ್ನಿಸಿ ಕೊಳ್ಳುತ್ತವೆ. ಸರ್ವನಾಮಗಳಲ್ಲಿ ಪುರುಷಾರ್ಥಕ, ಆತ್ಮಾರ್ಥಕ, ಪ್ರಶ್ನಾರ್ಥಕ ಮತ್ತು ನಿರ್ದೇಶಕವೆಂಬ 4 ವಿಧ ಉಂಟು.

1. ಪುರುಷಾರ್ಥಕಸರ್ವನಾಮಗಳು. ಉತ್ತಮ ಪುರುಷ, ಮಧ್ಯಮ ಪುರುಷ ಮತ್ತು ಪ್ರಥಮ ಪುರುಷವೆಂಬ ಮೂರು ಪುರುಷಾರ್ಥಕಗಳನ್ನು ಹೇಳುವ 3 ವಿಧವು. ಮಾತನಾಡುವ ಇಬ್ಬರಲ್ಲಿ ಮಾತನಾಡುವವನು ಉತ್ತಮ ಪುರುಷ, ಅವನು ಯಾರ ಕೂಡೆ ಮಾತನಾಡುತ್ತಾನೋ ಅವನು ಮಧ್ಯಮ ಪುರುಷ, ಈ ಇಬ್ಬರೂ ಯಾರ ಕುರಿತು ಮಾತನಾಡುತ್ತಾರೋ ಆ ಮೂರನೇಯವನು ಪ್ರಥಮಪುರುಷ. ಉದಾ:

| ಪುರುಷ | ಲಿಂಗ. | ಏಕವಚನ. | ಬಹುವಚನ. |
|---|---|---|---|
| ಉತ್ತಮ ಪುರುಷ | ಪುಂಸ್ತ್ರೀಲಿಂಗ | ನಾನು | ನಾವು |
| ಮಧ್ಯಮ ,, | ,, ,, | ನೀನು | ನೀವು |
| ಪ್ರಥಮ ,, | ಪು. ,, | ಅವನು | ಅವರು |
| ,, ,, | ಸ್ತ್ರೀ. ,, | ಅವಳು | ಅವರು |
| ,, ,, | ನಪುಂ. ,, | ಅದು | ಅವು, ಅವುಗಳು. |

2. ಆತ್ಮಾರ್ಥಕಸರ್ವನಾಮಗಳು. ಏಕವಚನ ತಾನು, ಬಹುವಚನ ತಾವು. ಇವುಗಳು ಪ್ರಥಮಪುರುಷದ ಮೂರು ಲಿಂಗಗಳ ಆತ್ಮಾರ್ಥವನ್ನು ಹೇಳುವವು. ಉದಾ: ಅವನು ತಾನು ಮೊದಲೇ ಬಂದನು. ಅವಳು ತನ್ನ ಪುಸ್ತಕವನ್ನು ತಂದಳು, ಅದು ತನ್ನ ಕಾಲು ಮುರಿದುಕೊಂಡಿತು.

3. ಪ್ರಶ್ನಾರ್ಥಕಸರ್ವನಾಮಗಳು. ಇವುಗಳಲ್ಲಿ ವ್ಯಕ್ತಿ ಕೇಳುವಂಥವು ಮತ್ತು ಗುಣಕೇಳುವಂಥವು, ಹೀಗೆ 2 ವಿಧ. ಹ್ಯಾಗಂದರೆ:—ವ್ಯಕ್ತಿ ಕೇಳುವಂಥವು—ಯಾವನು, ಯಾವಳು, ಯಾವದು; ಯಾವರು, ಯಾವವು ಅಥವಾ ಯಾವವುಗಳು. ಗುಣ ಕೇಳುವಂಥವು—ಎಂಥವನು, ಎಂಥವಳು, ಎಂಥಾದು; ಎಂಥವರು, ಎಂಥವು ಅಥವಾ ಎಂಥವುಗಳು. ಯಾರು, ಏನು ಎಂಬವುಗಳು ಪುರುಷತ್ರಯದಲ್ಲಿಯೂ, ಲಿಂಗತ್ರಯದಲ್ಲಿಯೂ, ವಚನದ್ವಯದಲ್ಲಿಯೂ, ಭೇದವಿಲ್ಲದೆ

ಒಟ್ಟಿಗೆ ಕೇಳುವ ಪ್ರಶ್ನಾರ್ಥಕಸರ್ವನಾಮಗಳಾಗಿರುತ್ತವೆ. ಉದಾ: ನಾನೇನು? ನೀನೇನು? ಅವರೇನು? ನಾನ್ಯಾರು? ನೀನ್ಯಾರು? ಅವರ್ಯಾರು? ಇತ್ಯಾದಿ.

ಯಾವನು ಮತ್ತು ಎಂಥವನು ಇತ್ಯಾದಿಗಳ ಸಂಕ್ಷೇಪರೂಪಗಳಾದ ಯಾವ ಮತ್ತು ಎಂಥ ಎಂಬುವುಗಳು ವಿಶೇಷಣಗಳಾಗಿ ಪ್ರಯೋಗಿಸಲ್ಪಡುತ್ತವೆ.

4. ನಿರ್ದೇಶಕಸರ್ವನಾಮಗಳು. ಇವುಗಳು ಪ್ರಶ್ನಾರ್ಥಕಸರ್ವನಾಮಗಳು ಕೇಳುವ ಪ್ರಶ್ನೆಗೆ ಪ್ರತ್ಯುತ್ತರವಾಗಿ ಸಮೀಪದಲ್ಲಿ ಮತ್ತು ದೂರದಲ್ಲಿ ಇರುವ ವಸ್ತುಗಳನ್ನಾಗಲಿ ಅವುಗಳ ಗುಣವನ್ನಾಗಲಿ ತೋರಿಸುವಂಥ ದೂರ ದರ್ಶಕ ಮತ್ತು ಸಮೀಪ ದರ್ಶಕ ಸರ್ವನಾಮಗಳೆಂದು 2 ವಿಧ. ಉದಾ:

I. ವ್ಯಕ್ತಿತೋರಿಸುವಂಥವು. ಸಮೀಪದಲ್ಲಿ—ಇವನು, ಇವಳು, ಇದು; ಇವರು, ಇವು, (ಇವುಗಳು); ದೂರದಲ್ಲಿ—ಅವನು, ಅವಳು, ಅದು, ಅವರು, ಅವು, (ಅವುಗಳು).

II. ಗುಣ ತೋರಿಸುವಂಥವು. ಸಮೀಪದಲ್ಲಿ—ಇಂಥವನು, ಇಂಥವಳು ಇಂಥಾದು; ಇಂಥವರು, ಇಂಥವು, (ಇಂಥವುಗಳು). ದೂರದಲ್ಲಿ—ಅಂಥವನು, ಅಂಥವಳು, ಅಂಥಾದು, ಅಂಥವರು, ಅಂಥವು, (ಅಂಥವುಗಳು).

ಇದು ಮತ್ತು ಅದು ಎಂಬುವುಗಳ ಸಂಕ್ಷೇಪರೂಪಗಳಾದ ಈ ಮತ್ತು ಆ, ಇಂಥವನು ಮತ್ತು ಅಂಥವನು ಎಂಬವುಗಳ ಸಂಕ್ಷೇಪರೂಪಗಳಾದ ಇಂಥ ಮತ್ತು ಅಂಥ ಕೂಡ ವಿಶೇಷಣಗಳಾಗಿ ಪ್ರಯೋಗಿಸಲ್ಪಡುತ್ತವೆ. ಪೂಜಾರ್ಥದಲ್ಲಿ ಇವನು, ಇವರು, ಎಂಬುವುಗಳಿಗೆ ಈತನು, ಈತಗಳು; ಅವನು, ಅವರು, ಎಂಬುವುಗಳಿಗೆ ಆತನು, ಆತಗಳು; ಇವಳು, ಇವರು, ಎಂಬುವುಗಳಿಗೆ ಈಕೆ, ಈಕೆಗಳು; ಅವಳು, ಅವರು, ಎಂಬುವುಗಳಿಗೆ ಆಕೆ, ಆಕೆಗಳು, ಎಂಬ ರೂಪಗಳು ಉಪಯೋಗವಾಗುವವು.

ಮೇಲೆ ಹೇಳಿದ ಎಲ್ಲಾ ಸರ್ವನಾಮಗಳು ನಾಮಪದಗಳಂತೆಯೇ ಸಂಬೋಧನವನ್ನುಳಿದ ಎಲ್ಲಾ ವಿಭಕ್ತಿಗಳನ್ನು ಹೊಂದುವವು. ಹ್ಯಾಗಂದರೆ:—

# ಸರ್ವನಾಮಗಳ ವಿಭಕ್ತಿ ರೂಪಮಾಲೆ.

| ವಿಭಕ್ತಿ ಸಂಜ್ಞೆಗಳು | ಉತ್ತಮಪುರುಷ. | | ಪ್ರಥಮ ಪುರುಷ. | | | | | ಪುರುಷತ್ರಯ, ಲಿಂಗತ್ರಯ, ವಚನದ್ವಯದಲ್ಲಿ ಕೂಡ. | |
|---|---|---|---|---|---|---|---|---|---|
| | ಏಕವಚನ | ಬಹುವಚನ | ಏಕವಚನ | | ಬಹುವಚನ | ಏಕವಚನ | ಬಹುವಚನ | | |
| | | | ಪುಲ್ಲಿಂಗ | ಸ್ತ್ರೀಲಿಂಗ | ಪುಂಸ್ತ್ರೀ | ನಪುಂಸಕಲಿಂಗ | | | |
| ಪ್ರ. | ನಾನು | ನಾವು | ಅವನು | ಅವಳು | ಅವರು | ಅದು | ಅವುಗಳು | ಯಾರು | ಏನು |
| ದ್ವಿ. | ನನ್ನನ್ನು | ನಮ್ಮನ್ನು | ಅವನನ್ನು | ಅವಳನ್ನು | ಅವರನ್ನು | ಅದನ್ನು | ಅವುಗಳನ್ನು | ಯಾರನ್ನು | ಏನು, ಏನ |
| ತೃ. | ನನ್ನಿಂದ | ನಮ್ಮಿಂದ | ಅವನಿಂದ | ಅವಳಿಂದ | ಅವರಿಂದ | ಅದರಿಂದ | ಅವುಗಳಿಂದ | ಯಾರಿಂದ | ಯಾತರಿಂದ |
| ಚ. | ನನಗೆ | ನಮಗೆ | ಅವನಿಗೆ | ಅವಳಿಗೆ | ಅವರಿಗೆ | ಅದಕ್ಕೆ | ಅವುಗಳಿಗೆ | ಯಾರಿಗೆ | ಯಾತಕ್ಕೆ, (ಯಾಕೆ) |
| ಪಂ. | ನನ್ನ ದೆಸೆ [ಯಿಂದ | ನಮ್ಮ ದೆಸೆ [ಯಿಂದ | ಅವನದೆಸೆ [ಯಿಂದ | ಅವಳದೆಸೆ [ಯಿಂದ | ಅವರ ದೆಸೆ [ಯಿಂದ | ಅದರ ದೆಸೆ [ಯಿಂದ | ಅವುಗಳ ದೆ [ಸೆಯಿಂದ | ಯಾರ ದೆಸೆ [ಯಿಂದ | ಯಾತರ ದೆಸೆ [ಯಿಂದ |
| ಷ. | ನನ್ನ | ನಮ್ಮ | ಅವನ | ಅವಳ | ಅವರ | ಅದರ | ಅವುಗಳ | ಯಾರ | ಯಾತರ |
| ಸ. | ನನ್ನಲ್ಲಿ | ನಮ್ಮಲ್ಲಿ | ಅವನಲ್ಲಿ | ಅವಳಲ್ಲಿ | ಅವರಲ್ಲಿ | ಅದರಲ್ಲಿ | ಅವುಗಳಲ್ಲಿ | ಯಾರಲ್ಲಿ | ಯಾತರಲ್ಲಿ |
| ಮೇಲಿ | ನೀನು | ನೀವು | ಇವನು | ಇವಳು | ಇವರು | ಇದು | ಇವುಗಳು | ಸರ್ವನಾಮಗಳಿಗೆ ಸಂ | |
| ನಂತೇ | ತಾನು | ತಾವು | ಯಾವನು | ಯಾವಳು | ಯಾವರು | ಯಾವದು | ಯಾವವುಗಳು | ಬೋಧನ ವಿಭಕ್ತಿ ಇಲ್ಲ. | |

"ಈತನು ಆತನು" ಅವನು ಎಂಬದರಂತೆ, "ಈಕೆ ಆಕೆ" ಎಕಾರಾಂತನಾಮಪದಗಳಂತೆ ಕೂಡ ವಿಭಕ್ತಿಗಳನ್ನು ಹೊಂದುವವು.

# ಸರ್ವನಾಮಗಳ ಹಳೆಗನ್ನಡ ವಿಭಕ್ತಿರೂಪಮಾಲೆ.

| ವಿಭಕ್ತಿಗಳು | ಉತ್ತಮ ಪುರುಷ | | ಪ್ರಥಮ ಪುರುಷ. | | | | | ಪುರುಷತ್ರಯ, ಲಿಂಗತ್ರಯ, ವಚನದ್ವಯದಲ್ಲಿ ಕೂಡ. | |
|---|---|---|---|---|---|---|---|---|---|
| | ಏಕವಚನ. | ಬಹುವಚನ | ಏಕವಚನ. | | ಬಹುವಚನ | ಏಕವಚನ | ಬಹುವಚನ | | |
| | | | ಪುಲ್ಲಿಂಗ. | ಸ್ತ್ರೀಲಿಂಗ | ಪುಂಸ್ತ್ರೀ. | ನಪುಂಸಕ ಲಿಂಗ | | | |
| ಪ್ರ. | ಆನ್, ಆಂ | ಆವ್ | ಅವಂ | ಅವಳ್ | ಅವರ್ | ಅದು | ಅವು | ಆರ್ | ಏನ್, ಏನಿ |
| ದ್ವಿ. | ಎನ್ನಂ | ಎಮ್ಮಂ | ಅವನಂ | ಅವಳಂ | ಅವರಂ | ಅದಂ | ಅವಂ | ಆರಂ | ಏನಂ, ಏನ |
| ತೃ. | ಎನ್ನಿಂ, ಎ<br>[ನ್ನಿಂದಂ, ಎ<br>[ನ್ನಿಂದೆ | ಎಮ್ಮಿಂ, ಎ<br>[ಮ್ಮಿಂದಂ,<br>[ಎಮ್ಮಿಂದೆ | ಅವನಿಂ, ಅ<br>[ವನಿಂದಂ,<br>[ಅವನಿಂದೆ | ಅವಳಿಂ, ಅ<br>[ವಳಿಂದಂ,<br>[ಅವಳಿಂದೆ | ಅವರಿಂ, ಅ<br>[ವರಿಂದಂ,<br>[ಅವರಿಂದೆ | ಅದರಿಂ, ಅ<br>[ದರಿಂದಂ,<br>[ಅದರಿಂದೆ | ಅವರಿಂ, ಅ<br>[ವರಿಂದಂ,<br>[ಅವರಿಂದೆ | ಆರಿಂ, ಆ<br>[ರಿಂದಂ,<br>[ಆರಿಂದೆ | ಏತರಿಂ, ಏತರಿಂ<br>[ದಂ, ಏತರಿಂದೆ |
| ಚ. | ಎನಗೆ | ಎಮಗೆ | ಅವಂಗೆ, ಗೆ | ಅವಳಿಂಗೆ * | ಅವರಿಂಗೆ, ಗೆ | ಅದರ್ಕೆ, ಕೆ | ಅವರ್ಕೆ, ಕೆ | ಆರ್ಗೆ | { ಏತರ್ಕೆ, ಏಕೆ (ಏತಕೆ) |
| ಪಂ. | ಎನತ್ತಣಿಂ,<br>[ಣಿಂದಂ | ಎಮ್ಮತ್ತ<br>ಣಿಂ, ಣಿಂದಂ | ಅವನತ್ತ<br>ಣಿಂ, ಣಿಂದಂ | ಅವಳತ್ತ<br>ಣಿಂ, ಣಿಂದಂ | ಅವರತ್ತ<br>ಣಿಂ, ಣಿಂದಂ | ಅದರತ್ತ<br>ಣಿಂ, ಣಿಂದಂ | ಅವರತ್ತ<br>ಣಿಂ, ಣಿಂದಂ | ಆರತ್ತಣಿಂ,<br>[ಣಿಂದಂ | ಏತರತ್ತಣಿಂ,<br>[ಣಿಂದಂ |
| ಷ. | ಎನ್ನಯ | ಎಮ್ಮಯ | ಅವನ | ಅವಳ | ಅವರ | ಅದರ | ಅವರ | ಆರ | ಏತರ |
| ಸ. | ಎನ್ನೊಳ್ | ಎಮ್ಮೊಳ್ | ಅವನೊಳ್ | ಅವಳೊಳ್ | ಅವರೊಳ್ | ಅದರೊಳ್ | ಅವರೊಳ್ | ಆರೊಳ್ | ಏತರೊಳ್ |
| ಮೇಲಿ | ನೀನ್ | ನೀವ್ | ಇವಂ | ಇವಳ್ | ಇವರ್ | ಇದು | ಇವರ್ | *ಅವಳ್ಗೆ ಸಹ ಆಗಬಹುದು. | |
| ನಂತೇ | ತಾನ್ ತಾಂ | ತಾವ್ | ಅವಂ | ಅವಳ್ | ಅವರ್ | ಅದು | ಅವರ್ | | |

"ಈತಂ, ಆತಂ" ಅವಂ ಎಂಬದರಂತೆ "ಈತಳ್, ಆತಳ್" ಅವಳ್ ಎಂಬದರಂತೆ ಕೂಡ ವಿಭಕ್ತಿಗಳನ್ನು ಹೊಂದುವವು.

## III. ಕ್ರಿಯಾಪದವು.

66. ವಸ್ತುಗಳು ಮಾಡುವಂಥ ಪಡುವಂಥ ಅಥವಾ ಇರುವಂಥ ಕ್ರಿಯೆಯನ್ನು ಹೇಳುವ ಪದವು ಕ್ರಿಯಾಪದವೆನ್ನಿಸಿ ಕೊಳ್ಳುವದು. ಇಂಥ ಕ್ರಿಯಾಪದಗಳ ಮೂಲಾಕ್ಷರಗಳಿಗೆ ಧಾತುಸೆಂಬ ಹೆಸರು.

67. ಕ್ರಿಯಾಪದಗಳಲ್ಲಿ ಕ್ರಮವಾಗಿ ರೂಪ ನಿಷ್ಪತ್ತಿ ಹೊಂದುವ ಕ್ರಮ ಕ್ರಿಯಾಪದವೆಂತಲೂ, ವಿಕಾರವಾಗಿ ರೂಪ ನಿಷ್ಪತ್ತಿ ಹೊಂದುವ ವಿಕೃತ ಕ್ರಿಯಾಪದವೆಂತಲೂ, ರೂಪನಿಷ್ಪತ್ತಿ ಇಲ್ಲದ ಊನ ಅಥವಾ ರೂಪವಿಹೀನ ಕ್ರಿಯಾಪದವೆಂತಲೂ, 3 ವಿಧವುಂಟು.

68. ಕ್ರಿಯಾಪದಗಳಲ್ಲಿ ವಿಶೇಷಿಸಲ್ಪಡುವ 7 ಲಕ್ಷಣಗಳು ಯಾವವಂದರೆ:—ಧಾತ್ವರ್ಥ, ಕ್ರಿಯಾರೂಪ, ಕಾಲ, ಅರ್ಥವಿಶೇಷ, ಪುರುಷ, ಲಿಂಗ ಮತ್ತು ವಚನ.

### ಧಾತ್ವರ್ಥಗಳು.

69. ಧಾತ್ವರ್ಥದಲ್ಲಿ, ಕರ್ಮವುಳ್ಳ ಧಾತು ಸಕರ್ಮಕವೆಂತಲೂ, ಕರ್ಮವಿಲ್ಲದ ಧಾತು ಅಕರ್ಮಕವೆಂತಲೂ, ಕ್ರಿಯೆಯನ್ನು ನಡಿಸುವವನು ಅದನ್ನು ಎರಡನೇಯವನಿಂದ ನಡಿಸಿದನೆಂಬ ಅರ್ಥವುಳ್ಳ ಧಾತು, ಪ್ರಯೋಜಕವೆಂತಲೂ, ಧಾತುಗಳು 3 ವಿಧ. ಕ್ರಿಯೆಯನ್ನು ಮಾಡುವವನು ಅಥವಾ ಪಡುವವನು ಆ ಕ್ರಿಯೆಯ ಕರ್ತೃ; ಅಂಥ ಕ್ರಿಯೆಯನ್ನು ತನ್ನ ಸ್ವಂತ ಕೈಯಿಂದ ಮಾಡುವವನು ಅದರ ನಿಜ ಕರ್ತೃವೆಂದೂ, ಎರಡನೇಯವನ ಮುಖಾಂತರ ಮಾಡಿಸುವವನು ಪರಕರ್ತೃವೆಂದೂ, ಹೇಳುವದುಂಟು; ಇಂಥ ಕ್ರಿಯೆಗಳಲ್ಲಿ ಮೊದಲನೇದನ್ನು ಸ್ವಕರ್ತೃಕ್ರಿಯೆ, ಎರಡನೇದನ್ನು ಪರಕರ್ತೃ ಕ್ರಿಯೆ, ಸಹ ಅನ್ನುವರು. ಉದಾ:

ಸ್ವಕರ್ತೃಕ್ರಿಯೆಗೆ } ಅಕರ್ಮಕಧಾತು—ಹುಡುಗನು ನಡಿಯುತ್ತಾನೆ.
ಸಕರ್ಮಕಧಾತು—ಹುಡುಗನು ಬರಿಯುತ್ತಾನೆ.

ಪರಕರ್ತೃಕ್ರಿಯೆಗೆ } ಸಕರ್ಮಕಧಾತು—ಸೇವಕನು ಮಗುವನ್ನು ನಡಿಸುತ್ತಾನೆ.
ಪ್ರಯೋಜಕಧಾತು—ಬೋಧಕನು ಹುಡುಗನಿಂದ ಕಾಗದ ಬರೆಸುತ್ತಾನೆ.

70. ಧಾತುಗಳ ವ್ಯುತ್ಪತ್ತಿಯನ್ನು ನೋಡಿದರೆ ಕೃತ್ಪ್ರತ್ಯಯಗಳಿಂದ ಹುಟ್ಟದೆ ಇರುವ ಶುದ್ಧವಾದ ಮೂಲಧಾತುಗಳಿಗೆ ಸಿದ್ಧಧಾತುಗಳೆಂದೂ, ಇಸು ಮುಂತಾದ ಕೃತ್ಪ್ರತ್ಯಯಗಳಿಂದ ಹುಟ್ಟಿದ ಧಾತುಗಳಿಗೆ ವ್ಯುತ್ಪನ್ನ ಅಥವಾ ಕೃದಂತ ಧಾತುಗಳೆಂದೂ, ಕ್ರಿಯಾಸಮಾಸದಿಂದ ಹುಟ್ಟಿದ ಧಾತುಗಳಿಗೆ ಸಮಾಸ ಧಾತುಗಳೆಂದೂ, ಸಹ ಹೇಳುವರು. ಉದಾ: ಸಿದ್ಧಧಾತುವಿಗೆ—ಮಾಡು, ನಡಿ, ಬರೆ. ವ್ಯುತ್ಪನ್ನ ಧಾತುವಿಗೆ—ಮಾಡಿಸು, ನಡಿಸು, ತಿರುಗು. ಸಮಾಸ ಧಾತುವಿಗೆ—ಸರಿ ಬೀಳು, ಆಶೆ ಮಾಡು, ಸುಖ ಪಡು ಇತ್ಯಾದಿ.

71. ಕೃತ್ಪ್ರತ್ಯಯಗಳಲ್ಲಿ ಇಸು ಪ್ರತ್ಯಯವು ಹೊಸ ಧಾತುಗಳನ್ನು ಹುಟ್ಟಿಸುವದರಲ್ಲಿ ಹೆಚ್ಚಾಗಿ ಉಪಯೋಗಿಸಲ್ಪಡುತ್ತದೆ; ಹ್ಯಾಗಂದರೆ—ಅಕರ್ಮಕ ಸಿದ್ಧಧಾತುವಿಗೆ ಇಸು ಪ್ರತ್ಯಯ ಕೂಡಿಸುವದರಿಂದ ಸಕರ್ಮಕ ಧಾತುವೂ, ಸಕರ್ಮಕ ಸಿದ್ಧಧಾತುವಿಗೆ ಇಸು ಪ್ರತ್ಯಯ ಕೂಡಿಸುವದರಿಂದ ಪ್ರಯೋಜಕಧಾತುವೂ, ಕನ್ನಡ ಅಥವಾ ಸಂಸ್ಕೃತ ನಾಮಪದಗಳಿಗಾಗಲಿ, ವಿಶೇಷಣ ಪದಗಳಿಗಾಗಲಿ, ಇಸು ಪ್ರತ್ಯಯ ಕೂಡಿಸುವದರಿಂದ ಹೊಸ ಧಾತುವೂ ಕೂಡ ಆಗುವವು. ಉದಾ: ಮಾಡು—ಮಾಡಿಸು, ನಡಿ—ನಡಿಸು, ದುಃಖ—ದುಃಖಿಸು, ಲೋಪ—ಲೋಪಿಸು ಇತ್ಯಾದಿ.

## ಕ್ರಿಯಾರೂಪಗಳು.

72. ಕ್ರಿಯಾಪದಗಳ ಮೇಲೆ ಹತ್ತುವ ಪ್ರತ್ಯಯಗಳಲ್ಲಿ ಅವ್ಯಯಪ್ರತ್ಯಯಗಳೆಂದೂ, ನಾಮಪ್ರತ್ಯಯಗಳೆಂದೂ, ಪುರುಷಪ್ರತ್ಯಯಗಳೆಂದೂ, 3 ವಿಧವುಂಟು; ಹೀಗಿರಲಾಗಿ ಆಯಾ ಪ್ರತ್ಯಯಗಳ ಹತ್ತುವಿಕೆಯಿಂದ ಹುಟ್ಟುವ ಕ್ರಿಯಾಪದಗಳಲ್ಲಿ ಅವ್ಯಯಾತ್ಮಕ, ನಾಮಾತ್ಮಕ ಮತ್ತು ಪುರುಷಾತ್ಮಕ ಎಂಬ 3 ವಿಧಗಳನ್ನು ಮಾಡಿದ್ದಾರೆ. ಅವ್ಯಯಾತ್ಮಕ, ನಾಮಾತ್ಮಕ ಈ 2 ಕ್ಕೂ ಅವ್ಯಯರೂಪವೆಂತಲೂ, ಪುರುಷಾತ್ಮಕ ರೂಪಕ್ಕೆ ಆಖ್ಯಾತರೂಪವೆಂತಲೂ, ಕೆಲವರು ಅನ್ನುವರು.

## ಕಾಲಗಳು.

73. ಕಾಲಗಳಲ್ಲಿ ವರ್ತಮಾನಕಾಲ, ಭೂತಕಾಲ ಮತ್ತು ಭವಿಷ್ಯತ್ಕಾಲ ಎಂದು 3 ವಿಧ. ವರ್ತಮಾನಕಾಲವೆಂದರೆ ನಡೆಯುವ ಕಾಲ, ಭೂತಕಾಲವೆಂ

ದರೆ ಹೋದಕಾಲ, ಭವಿಷ್ಯತ್ಕಾಲವೆಂದರೆ ಬರುವ ಕಾಲ. ಭವಿಷ್ಯತ್ಕಾಲಕ್ಕೆ ಭಾವಿ ಎಂಬ ಇನ್ನೊಂದು ರೂಪವು ಸೇರಿ ಇರುತ್ತದೆ; ಈ ಎರಡರ ಸಾಧಾರಣ ಅರ್ಥಕ್ಕೆ ಹೆಚ್ಚು ವ್ಯತ್ಯಾಸವಿಲ್ಲ; ಭವಿಷ್ಯತ್ಕಾಲವು ಭವಿಷ್ಯದರ್ಥ ಮಾತ್ರವಲ್ಲದೆ ಸಂಶಯಾರ್ಥವನ್ನೂ ಹೇಳುವದು; ಭಾವಿಯು ತದ್ಧರ್ಮಾರ್ಥದಲ್ಲಿ ಪ್ರಯೋಗಿಸಲ್ಪಡುವದು.

## ಅರ್ಥವಿಶೇಷಗಳು.

74. ಮೂರು ಕಾಲಗಳಲ್ಲಿಯೂ ನಡೆಯುವಂಥ ಕ್ರಿಯೆಗಳನ್ನು ಹೇಳುವ ಸಂಭವಾರ್ಥವೆಂದೂ, ಮೂರು ಕಾಲಗಳಲ್ಲಿಯೂ ಸಂಭವಿಸದ ಕ್ರಿಯೆಗಳನ್ನು ಹೇಳುವ ಅಭಾವಾರ್ಥ ಅಥವಾ ನಿಷೇಧಾರ್ಥವೆಂದೂ ಅಜ್ಞಾಪನೆ, ವಿಜ್ಞಾಪನೆ, ಅನುಮತಿ ಮುಂತಾದವುಗಳನ್ನು ಹೇಳುವ ವಿಧ್ಯರ್ಥವೆಂದೂ, ಅರ್ಥವಿಶೇಷಗಳು ಮೂರು ವಿಧ.

75. ಉತ್ತಮ, ಮಧ್ಯಮ, ಪ್ರಥಮವೆಂಬ 3 ಪುರುಷಗಳು, ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗವೆಂಬ 3 ಲಿಂಗಗಳು ಏಕವಚನ, ಬಹುವಚನವೆಂಬ 2 ವಚನಗಳು ಕೂಡ ಈ ಮೊದಲೇ ವಿವರಿಸಲ್ಪಟ್ಟವೆ; ಅದದರಿಂದ ಇಲ್ಲಿ ತಿರುಗಿ ವಿವರಿಸಲಿಲ್ಲ.

## ಅವ್ಯಯಾತ್ಮಕ ಕ್ರಿಯಾಪದರೂಪಗಳು.

76. ಅವ್ಯಯಾತ್ಮಕರೂಪದಲ್ಲಿ ಭಾವರೂಪ, ನ್ಯೂನರೂಪವೆಂಬ 2 ವಿಧ.

1. ಭಾವರೂಪಗಳು ಕ್ರಿಯೆಯನ್ನು ಭಾವಾರ್ಥವಾಗಿ ಹೇಳಿ, ಧಾತುಗಳ ಮೇಲೆ ಅ, ಅಲು, ಅಲಿಕ್ಕೆ ಎಂಬ ಪ್ರತ್ಯಯಗಳನ್ನು ಕೂಡಿಸುವದರಿಂದ ಆಗುತ್ತವೆ. ಈ ಪ್ರತ್ಯಯಗಳು ಧಾತುಗಳ ಮೇಲೆ ಹತ್ತುವಾಗ ಉಕಾರಾಂತ ಧಾತುಗಳ ಉ ಸ್ವರಕ್ಕೆ ಲೋಪವೂ, ಆ, ಇ, ಈ, ಎ, ಏ, ಐ ಕಾರಾಂತ ಧಾತುಗಳ ಅಂತಸ್ವರದ ಮುಂದೆ ಯಕಾರಾಗಮ ಕೂಡ ಬರುವದು ಉದಾ:

| ಭಾವರೂಪಗಳು | ಪ್ರತ್ಯಗಳು | ಉಕಾರಾಂತ ಧಾತು | ಆ, ಇ, ಕಾರಾದಿ ಸ್ವರಾಂತ ಧಾತುಗಳು |
|---|---|---|---|
| 1ನೇ ಭಾವರೂಪ | ಅ | ಮಾಡ | ನುಡಿಯ |
| 2ನೇ ,, | ಅಲು | ಮಾಡಲು | ನುಡಿಯಲು |
| 3ನೇ ,, | ಅಲಿಕ್ಕೆ. | ಮಾಡಲಿಕ್ಕೆ | ನುಡಿಯಲಿಕ್ಕೆ |

ಧಾತುಗಳ ಮೇಲೆ ಎ ಎಂಬ ಪ್ರತ್ಯಯವನ್ನು ಕೂಡಿಸುವದರಿಂದ ಒಂದು ವಿಧದ ಹಳೆಗನ್ನಡದ ಭಾವ ರೂಪಗಳು ಆಗುವವು. ಉದಾ: ಮಾಡು—ಮಾಡೆ, ನುಡಿ—ನುಡಿಯೆ, ಬರೆ—ಬರೆಯೆ ಇತ್ಯಾದಿ.

2. ನ್ಯೂನರೂಪಗಳು ಹೇಳುವ ಕ್ರಿಯೆಯು ಅಪೂರ್ಣವಾಗಿದೆ; ಅದನ್ನು ಪೂರ್ಣಮಾಡುವದಕ್ಕೆ ಇನ್ನೊಂದು ಕ್ರಿಯಾಪದವು ಅಗತ್ಯ; ಈ ಕಾರಣದಿಂದ ಅದಕ್ಕೆ ಕೆಲವರು ಕ್ರಿಯಾನ್ಯೂನ ಅನ್ನುವರು. ಅವುಗಳಲ್ಲಿ ವರ್ತಮಾನನ್ಯೂನ, ಭೂತನ್ಯೂನ ಮತ್ತು ನಿಷೇಧನ್ಯೂನವೆಂಬ 3 ವಿಧ. ವರ್ತಮಾನನ್ಯೂನವು "ಉತ್ತ" ಅಥವಾ ಉತ್ತಾ, ಭೂತನ್ಯೂನವು "ಇ, ದು," ನಿಷೇಧನ್ಯೂನವು "ಅದೆ" ಎಂಬ ಪ್ರತ್ಯಯಗಳನ್ನು ಧಾತುಗಳ ಮೇಲೆ ಹತ್ತಿಸುವದರಿಂದ ಆಗುತ್ತವೆ. ಈ ಪ್ರತ್ಯಯಗಳು ಧಾತುಗಳ ಮೇಲೆ ಸೇರುವಾಗ ಸಂಧಿ ವಿಧಿಯು ಮೇಲೆ ಭಾವರೂಪಕ್ಕೆ ಹೇಳಿದಂತೆಯೇ ಆಗಿರುತ್ತದೆ. ಉದಾ:

| | | | |
|---|---|---|---|
| ವರ್ತಮಾನ | ಉತ್ತಾ. | ಮಾಡುತ್ತಾ. | ನುಡಿಯುತ್ತಾ. |
| ಭೂತ | ಇ, ದು. | ಮಾಡಿ. | ನುಡಿದು. |
| ನಿಷೇಧ | ಅದೆ. | ಮಾಡದೆ. | ನುಡಿಯದೆ. |

ಹೊಸಗನ್ನಡ ಭೂತನ್ಯೂನಗಳಿಗೆ "ಇದು" ಅಥವಾ "ಇಯೆ" ಎಂಬ ಪ್ರತ್ಯಯಗಳನ್ನು ಕೂಡಿಸುವದರಿಂದ ಹಳೆಗನ್ನಡ ಭೂತನ್ಯೂನಗಳು ಆಗುತ್ತವೆ. ಉದಾ: ಮಾಡಿದು, ಮಾಡಿಯೆ. ನುಡಿದು, ನುಡಿಯೆ ಇತ್ಯಾದಿ.

## ನಾಮಾತ್ಮಕ ಕ್ರಿಯಾಪದರೂಪಗಳು.

77. ನಾಮಾತ್ಮಕರೂಪದಲ್ಲಿ ಕೃದ್ವಾಚಿ, ಕೃದ್ನಾಮ ಮತ್ತು ಕ್ರಿಯಾನಾಮವೆಂಬ 3 ವಿಧ ವುಂಟು.

I. ಕೃದ್ವಾಚಿಗಳಲ್ಲಿ ವರ್ತಮಾನ, ಭೂತ, ಭವಿಷ್ಯತ್ ಮತ್ತು ನಿಷೇಧ ಕೃದ್ವಾಚಿಗಳೆಂಬ 4 ವಿಧ ಇರಲಾಗಿ, ವರ್ತಮಾನ ಮತ್ತು ಭವಿಷ್ಯತ್ ಕೃದ್ವಾಚಿಯು "ಉವ," ಭೂತಕೃದ್ವಾಚಿಯು "ಇದ; ದ" ಮತ್ತು ನಿಷೇಧ ಕೃದ್ವಾಚಿಯು "ಅದ" ಎಂಬ ಪ್ರತ್ಯಯಗಳನ್ನು ಧಾತುಗಳ ಮೇಲೆ ಕೂ

ಡಿಸುವದರಿಂದ ಆಗುತ್ತವೆ. ಈ ಪ್ರತ್ಯಯಗಳು ಧಾತುಗಳ ಮೇಲೆ ಕೂಡು ವಾಗಲೂ ಸಂಧಿ ವಿಧಿಯು ಮೇಲಿನಷ್ಟೇ ಆಗಿರುತ್ತದೆ. ಉದಾ:

| | | | |
|---|---|---|---|
| ವರ್ತಮಾನ } ಭವಿಷ್ಯತ್ | ಉವ | ಮಾಡುವ. | ನುಡಿಯುವ |
| ಭೂತ | ಇದ, ದ. | ಮಾಡಿದ. | ನುಡಿದ |
| ನಿಷೇಧ | ಅದ. | ಮಾಡದ. | ನುಡಿಯದ. |

ಕೃದ್ವಾಚೆಗಳು ವಿಶೇಷಣ ಪದಗಳಾಗಿ ಉಪಯೋಗಿಸಲ್ಪಟ್ಟು ಅವು ಗಳು ಹೇಳುವ ಅಸಮಾಪ್ತ ಕ್ರಿಯೆಯನ್ನು ಪೂರ್ಣಮಾಡುವ ಹಾಗೆ ಅವುಗ ಳ ಮುಂದೆ ನಾಮಪದಗಳು ಸೇರುವದರಿಂದ ಅವುಗಳನ್ನು ಕೆಲವರು ಶಬ್ದನ್ಯೂ ನ ಅನ್ನುವರು.

2. ಕೃದ್ನಾನಾಮಗಳು ಕೃದ್ವಾಚೆಗಳಿಗೆ ಪ್ರಥಮ ಪುರುಷ ಸರ್ವನಾ ಮಗಳನ್ನು ಕೂಡಿಸುವದರಿಂದ ಉಂಟಾಗುತ್ತವೆ. ಉದಾ:

ವರ್ತಮಾನ } ಭವಿಷ್ಯತ್ ಮಾಡುವವನು, ನುಡಿಯುವವನು ಇತ್ಯಾದಿ.
ಭೂತ—ಮಾಡಿದವನು, ನುಡಿದವನು ಇತ್ಯಾದಿ.
ನಿಷೇಧ—ಮಾಡದವನು, ನುಡಿಯದವನು ಇತ್ಯಾದಿ.

ಕೃದ್ನಾಮಗಳು ಕ್ರಿಯೆಯಿಂದ ಹುಟ್ಟಿದ ಕ್ರಿಯಾವಾಚಕ ನಾಮಗಳಾ ಗಿ ನಾಮಪದಗಳಿಗೆ ಬರುವ ವಿಭಕ್ತಿ ಮುಂತಾದ ಎಲ್ಲಾ ವಿಶೇಷಗಳನ್ನು ಹೊಂದುವವು.

3. ಕ್ರಿಯಾನಾಮಗಳು ಕೂಡ ಕೃದ್ನಾಮಗಳಂತೆ ಕ್ರಿಯಾವಾಚಕ ನಾ ಮಗಳಾಗಿ ಅವುಗಳಂತೆಯೇ ವಿಭಕ್ತಿ ಇತ್ಯಾದಿಗಳನ್ನು ಪಡೆಯುವವು. ಇವುಗ ಳು ಉಂಟಾಗಲಿಕ್ಕೆ ಕೃದ್ವಾಚೆಗಳ ಮೇಲೆ "ದು" ಪ್ರತ್ಯಯವು ಹತ್ತುವದು. ಉದಾಹರಣೆಗಳು:

ವರ್ತಮಾನ } ಭವಿಷ್ಯತ್ ಮಾಡುವದು—ನುಡಿಯುವದು ಇತ್ಯಾದಿ.
ಭೂತ—ಮಾಡಿದ್ದು—ನುಡಿದದ್ದು ಇತ್ಯಾದಿ.
ನಿಷೇಧ—ಮಾಡದ್ದು—ನುಡಿಯದ್ದು ಇತ್ಯಾದಿ.

## ಪುರುಷಾತ್ಮಕ ಕ್ರಿಯಾಪದರೂಪಗಳು.

78. ಆಖ್ಯಾತ ಪ್ರತ್ಯಯಗಳೆಂಬ ಪುರುಷ ಪ್ರತ್ಯಯಗಳನ್ನು ಹೊಂದುವ ಕ್ರಿಯಾಪದಗಳೆಲ್ಲಾ ಪುರುಷಾತ್ಮಕ ರೂಪಗಳಾಗಿರುತ್ತವೆ. ಪುರುಷ ಪ್ರತ್ಯಯಗಳು ವರ್ತಮಾನ, ಭೂತ, ಭವಿಷ್ಯತ್, ಭಾವಿ, ನಿಷೇಧ, ವಿಧಿ ಎಂಬ 6 ವಿದವಾಗಿರುತ್ತವೆ. ಹ್ಯಾಗಂದರೆ:—

### ಪುರುಷ ಪ್ರತ್ಯಯಗಳು.

| | ಪುರುಷಗಳು | ಸರ್ವನಾಮಗಳು | ವರ್ತಮಾನ | ಭೂತ | ಭವಿಷ್ಯತ್ | ಭಾವಿ | ನಿಷೇಧ | ವಿಧಿ |
|---|---|---|---|---|---|---|---|---|
| ಏಕವಚನ | ಉತ್ತಮ. | ನಾನು | ಏನೆ | ಎನು | ಏನು | ಎನು | ಎನು | ಉವೆ |
| | ಮಧ್ಯಮ. | ನೀನು | ಈ | ಇ, ಎ | ಈ | ಇ, ಎ | ಇ, ಎ | |
| | ಪ್ರಥಮ.ಪು. | ಅವನು | ಆನೆ | ಅನು | ಆನು | ಅನು | ಅನು | ಅಲಿ |
| | ಸ್ತ್ರೀ. | ಅವಳು | ಆಳೆ | ಅಳು | ಆಳು | ಅಳು | ಅಳು | ಅಲಿ |
| | ನಪುಂ. | ಅದು | ಅದೆ | ಇತು | ಈತು | ಅದು | ಅದು | ಅಲಿ |
| ಬಹುವಚನ | ಉತ್ತಮ. | ನಾವು | ಏವೆ | ಎವು | ಏವು | ಎವು | ಎವು | ಉವಾ<br>ಓಣ |
| | ಮಧ್ಯಮ. | ನೀವು | ಈರಿ | ಇರಿ | ಈರಿ | ಇರಿ | ಅರಿ | ಇರಿ |
| | ಪ್ರಥಮ.ಪು. | ಅವರು | ಆರೆ | ಅರು | ಆರು | ಅರು | ಅರು | ಅಲಿ |
| | ಸ್ತ್ರೀ. | ಅವರು | ಆರೆ | ಅರು | ಆರು | ಅರು | ಅರು | ಅಲಿ |
| | ನಪುಂ. | ಅವುಗಳು | ಅವೆ | ಅವು | ಆವು | ಅವು | ಅವು | ಅಲಿ |

79. ಮೇಲಿನ ಪಟ್ಟಿಯಲ್ಲಿ ಕಾಣಿಸಿದ ಆಯಾ ಪ್ರತ್ಯಯಗಳನ್ನು ಕ್ರಿಯಾಪದಗಳ ಬೇರೆ ಬೇರೆ ರೂಪಗಳ ಮೇಲೆ ಹತ್ತಿಸುವದರಿಂದ ಬೇರೆ ಬೇರೆ ಪುರುಷಾತ್ಮಕ ಕ್ರಿಯಾಪದರೂಪಗಳು ಆಗುತ್ತವೆ. ಹ್ಯಾಗಂದರೆ:—

1. ಧಾತುಗಳ ವರ್ತಮಾನ ನ್ಯೂನರೂಪದ ಮೇಲೆ ವರ್ತಮಾನ ಪ್ರತ್ಯಯಗಳನ್ನು ಕೂಡಿಸುವದರಿಂದ ವರ್ತಮಾನ ಕ್ರಿಯಾಪದಗಳು ಆಗುತ್ತವೆ.

2. ಧಾತುಗಳ ಭೂತ ಕೃದ್ವಾಚಿಯ ಮೇಲೆ ಭೂತ ಪ್ರತ್ಯೆಯಗಳನ್ನು ಕೂಡಿಸುವದರಿಂದ ಭೂತ ಕ್ರಿಯಾಪದಗಳು ಆಗುತ್ತವೆ; ಆದರೆ ನಪುಂಸಕ ಏಕವಚನದಲ್ಲಿ ಭೂತ ಪ್ರತ್ಯಯುವು ಧಾತುವಿನ ಮೇಲೆ ಸೇರುವದು.

3. ಧಾತುಗಳ ಭೂತ ನ್ಯೂನರೂಪದ ಮೇಲೆ ಭವಿಷ್ಯತ್ ಪ್ರತ್ಯಯುಗಳನ್ನು ಕೂಡಿಸುವದರಿಂದ ಭವಿಷ್ಯತ್ ಕ್ರಿಯಾಪದಗಳು ಆಗುತ್ತವೆ.

4. ಧಾತುಗಳ ಭವಿಷ್ಯತ್ ಕೃದ್ವಾಚಿಗಳ ಮೇಲೆ ಭಾವಿ ಪ್ರತ್ಯೆಯುಗಳನ್ನು ಕೂಡಿಸುವದರಿಂದ ಭಾವಿ ಕ್ರಿಯಾಪದಗಳು ಆಗುತ್ತವೆ.

5. ಧಾತುಗಳ ಮೇಲೆ ನಿಷೇಧ ಪ್ರತ್ಯಗಳನ್ನು ಕೂಡಿಸುವದರಿಂದ ನಿಷೇಧ ಕ್ರಿಯಾಪದಗಳು ಆಗುತ್ತವೆ.

6. ಧಾತುಗಳ ಮೇಲೆ ವಿಧಿ ಪ್ರತ್ಯಯುಗಳನ್ನು ಕೂಡಿಸುವದರಿಂದ ವಿಧಿ ಕ್ರಿಯಾಪದಗಳು ಆಗುತ್ತವೆ. ಮಧ್ಯಮಪುರುಷ ಏಕವಚನದಲ್ಲಿ ಮಾತ್ರ ಧಾತುವೇ ಉಪಯೋಗಿಸಲ್ಪಡುವದು. ಪೂಜಾರ್ಥದಲ್ಲಿ ಮಾತ್ರ ಏಕವಚನಕ್ಕೂ ಬಹುವಚನಕ್ಕೂ "ಉವದು" ಪ್ರತ್ಯಯ ಸೇರುವದು.

80. ಮೇಲೆ ವಿವರಿಸಿದ ಕ್ರಿಯಾಪದರೂಪಗಳ ಉದಾಹರಣೆಗಳನ್ನು ಈ ಕೆಳಗಿನ ಕ್ರಿಯಾಮಾಲೆಗಳಿಂದ ತಿಳಕೊಳ್ಳತಕ್ಕದ್ದು. ಹಳೆಗನ್ನಡ ಕ್ರಿಯಾರೂಪಗಳನ್ನು ಹಳೆಗನ್ನಡ ಕ್ರಿಯಾಮಾಲೆಗಳಿಂದ ತಿಳಿಯ ಬಹುದು.

81. ಈ ವರೆಗೆ ವಿವರಿಸಿದ ಕ್ರಮ ಕ್ರಿಯಾಪದಗಳ ರೂಪ ನಿಷ್ಪತ್ತಿಗೆ ವಿರೋಧವಾಗಿ ಭೂತ, ಭವಿಷ್ಯತ್ ರೂಪಗಳಲ್ಲಿಯೂ ನಿಷೇಧ, ವಿಧಿ ರೂಪಗಳಲ್ಲಿಯೂ ವಿಕೃತಿಯನ್ನು ಹೊಂದುವ ಕ್ರಿಯಾಪದಗಳಿಗೆ ವಿಕೃತ ಕ್ರಿಯಾಪದಗಳೆಂಬ ಹೆಸರು. ಅವುಗಳ ಬೇರೆ ಬೇರೆ ವಿಕೃತ ರೂಪಗಳನ್ನು ಮುಂದೆ 52, 53, 54 ನೇ ಪಾನುಗಳಲ್ಲಿ ನೋಡಿ ತಿಳಿಯ ತಕ್ಕದ್ದು.

## ಉಕಾರಾಂತ ಧಾತುಗಳ ಪುರುಷಾತ್ಮಕ ಕ್ರಿಯಾಮಾಲೆ.

| | ಸರ್ವನಾಮಗಳು | | ವರ್ತಮಾನ | ಭೂತ | ಭವಿಷ್ಯತ್ | ಭಾವಿ | ನಿಷೇಧ | ವಿಧಿ |
|---|---|---|---|---|---|---|---|---|
| ಏಕವಚನ. | ಉತ್ತಮ. | ನಾನು | ಮಾಡುತ್ತೇನೆ | ಮಾಡಿದೆನು | ಮಾಡೇನು | ಮಾಡುವೆನು | ಮಾಡೆನು | ಮಾಡುವೆ<br>ಮಾಡಲಿ |
| | ಮಧ್ಯಮ. | ನೀನು | ಮಾಡುತ್ತೀ | ಮಾಡಿದಿ, ದೆ | ಮಾಡೀ | ಮಾಡುವಿ, ವೆ | ಮಾಡಿ, ಡೆ | ಮಾಡು<br>ಮಾಡುವದು |
| | ಪ್ರಥಮ. ಪು. | ಅವನು | ಮಾಡುತ್ತಾನೆ | ಮಾಡಿದನು | ಮಾಡ್ಯಾನು | ಮಾಡುವನು | ಮಾಡನು | ಮಾಡಲಿ |
| | ಸ್ತ್ರೀ. | ಅವಳು | ಮಾಡುತ್ತಾಳೆ | ಮಾಡಿದಳು | ಮಾಡ್ಯಾಳು | ಮಾಡುವಳು | ಮಾಡಳು | |
| | ನಪುಂ. | ಅದು | ಮಾಡುತ್ತದೆ | ಮಾಡಿತು | ಮಾಡೀತು | ಮಾಡುವದು | ಮಾಡದು | |
| ಬಹುವಚನ. | ಉತ್ತಮ. | ನಾವು | ಮಾಡುತ್ತೇವೆ | ಮಾಡಿದೆವು | ಮಾಡೇವು | ಮಾಡುವೆವು | ಮಾಡೆವು | ಮಾಡುವಾ<br>ಮಾಡೋಣ |
| | ಮಧ್ಯಮ. | ನೀವು | ಮಾಡುತ್ತೀರಿ | ಮಾಡಿದಿರಿ | ಮಾಡೀರಿ | ಮಾಡುವಿರಿ | ಮಾಡರಿ | ಮಾಡಿರಿ<br>ಮಾಡುವದು |
| | ಪ್ರ. ಪು. ಸ್ತ್ರೀ. | ಅವರು | ಮಾಡುತ್ತಾರೆ | ಮಾಡಿದರು | ಮಾಡ್ಯಾರು | ಮಾಡುವರು | ಮಾಡರು | ಮಾಡಲಿ |
| | ನಪುಂ. | ಅವು<br>ಗಳು | ಮಾಡುತ್ತವೆ | ಮಾಡಿದವು | ಮಾಡ್ಯಾವು | ಮಾಡುವವು | ಮಾಡವು | |

## ಅ, ಇ, ಈ, ಎ, ಏ ಕಾರಾಂತಧಾತುಗಳ ಪುರುಷಾತ್ಮಕ ಕ್ರಿಯಾಮಾಲೆ.

| ಸರ್ವನಾಮಗಳು. | | ವರ್ತಮಾನ. | ಭೂತ. | ಭವಿಷ್ಯತ್. | ಭಾವಿ. | ನಿಷೇಧ. | ವಿಧಿ. |
|---|---|---|---|---|---|---|---|
| ಉತ್ತಮ. | ನಾನು | ನುಡಿಯುತ್ತೇನೆ | ನುಡಿದೆನು | ನುಡಿದೇನು | ನುಡಿಯುವೆನು | ನುಡಿಯೆನು | ನುಡಿಯುವೆ<br>ನುಡಿಯಲಿ |
| ಮಧ್ಯಮ. | ನೀನು | ನುಡಿಯುತ್ತೀ | ನುಡಿದಿ, ದೆ | ನುಡಿದೀ | ನುಡಿಯುವಿ, ವೆ | ನುಡಿಯಿ, ಯೆ | ನುಡಿ<br>ನುಡಿಯುವದು |
| ಪ್ರಥಮ. ಪು. | ಅವನು | ನುಡಿಯುತ್ತಾನೆ | ನುಡಿದನು | ನುಡಿದಾನು | ನುಡಿಯುವನು | ನುಡಿಯನು | ನುಡಿಯಲಿ |
| ಸ್ತ್ರೀ. | ಅವಳು | ನುಡಿಯುತ್ತಾಳೆ | ನುಡಿದಳು | ನುಡಿದಾಳು | ನುಡಿಯುವಳು | ನುಡಿಯಳು | |
| ನಪುಂ. | ಅದು | ನುಡಿಯುತ್ತದೆ | ನುಡಿದಿತು | ನುಡಿದೀತು | ನುಡಿಯುವದು | ನುಡಿಯದು | |
| ಉತ್ತಮ. | ನಾವು | ನುಡಿಯುತ್ತೇವೆ | ನುಡಿದೆವು | ನುಡಿದೇವು | ನುಡಿಯುವೆವು | ನುಡಿಯೆವು | ನುಡಿಯುವಾ<br>ನುಡಿಯೋಣ |
| ಮಧ್ಯಮ. | ನೀವು | ನುಡಿಯುತ್ತೀರಿ | ನುಡಿದಿರಿ | ನುಡಿದೀರಿ | ನುಡಿಯುವಿರಿ | ನುಡಿಯರಿ | ನುಡಿಯಿರಿ<br>ನುಡಿಯುವದು |
| ಪ್ರ. ಪು. ಸ್ತ್ರೀ. | ಅವರು | ನುಡಿಯುತ್ತಾರೆ | ನುಡಿದರು | ನುಡಿದಾರು | ನುಡಿಯುವರು | ನುಡಿಯರು | ನುಡಿಯಲಿ |
| ನಪುಂ. | ಅವು<br>ಗಳು | ನುಡಿಯುತ್ತವೆ | ನುಡಿದವು | ನುಡಿದಾವು | ನುಡಿಯುವವು | ನುಡಿಯವು | |

# ಹಳೆಗನ್ನಡ ಕ್ರಿಯಾಮಾಲೆ.

ವ್ಯಂಜನಾಂತ ಧಾತು, ಬಾಳ್.

| | | | | | | |
|---|---|---|---|---|---|---|
| ಅವ್ಯಯಾತ್ಮಕ ರೂಪಗಳು. | ಭಾವರೂಪ. | ಬಾಳ, ಬಾಳಲ್ (ಬಾಳ್ಗೆ), ಬಾಳಲ್ಕೆ. | | | | |
| | ಕಾಲಾರ್ಥ ವಿಶೇಷಗಳು. | ವರ್ತಮಾನ. | ಭೂತ. | ಭವಿಷ್ಯತ್. | ನಿಷೇಧ. | ವಿಧಿ. |
| | ನ್ಯೂನರೂಪ. | ಬಾಳುತ್ತೆ | ಬಾಳ್ದು, ಬಾಳ್ದು, ಳಿಯೆ | | ಬಾಳದೆ | |
| ನಾಮಾತ್ಮಕ ರೂಪಗಳು. | ಕೃದ್ವಾಚಿ | ಬಾಳ್ವ. | ಬಾಳ್ದ. | ಬಾಳ್ವ. | ಬಾಳದ. | |
| | ಕೃದ್ನಾಮ<br>ಕ್ರಿಯಾನಾಮ | ಬಾಳ್ವಂ, ಬಾಳ್ವಳ್, ಬಾಳ್ವುದು | ಬಾಳ್ದಂ, ಬಾಳ್ದಳ್, ಬಾಳ್ದುದು | ಬಾಳ್ವಂ, ಬಾಳ್ವಳ್, ಬಾಳ್ವುದು | ಬಾಳದಂ, ಬಾಳದಳ್ ಬಾಳದುದು | |
| ಪುರುಷಾತ್ಮಕ ರೂಪಗಳು. ಏಕವಚನ | ಉತ್ತಮ. | ಬಾಳ್ದಪೆಂ, ನ್. | ಬಾಳ್ದೆಂ, ನ್. | ಬಾಳ್ವೆನ್ | ಬಾಳೆನ್ | ಬಾಳ್ವೆ, ಬಾಳಲಿ |
| | ಮಧ್ಯಮ. | ಬಾಳ್ದಪೆಯ್ | ಬಾಳ್ದೆಯ್ | ಬಾಳ್ವೆಯ್ | ಬಾಳೆಯ್ | ಬಾಳ್, ಬಾಳ್ವುದು |
| | ಪ್ರಥಮ. ಪು. | ಬಾಳ್ದಪಂ | ಬಾಳ್ದಂ, ಬಾಳ್ದನ್ | ಬಾಳ್ಗುಂ, ನ್. | ಬಾಳಂ, ನ್ | ಬಾಳ್ಗೆ, ಬಾಳಲಿ |
| | ಸ್ತ್ರೀ. | ಬಾಳ್ದಪಳ್ | ಬಾಳ್ದಳ್ | ಬಾಳ್ಗಳ್ | ಬಾಳಳ್ | |
| | ನಪುಂ. | ಬಾಳ್ದಪುದು | ಬಾಳ್ದುದು, ಬಾಳ್ದತ್ತು | ಬಾಳ್ವುದು | ಬಾಳದು | |
| ಬಹುವಚನ | ಉತ್ತಮ. | ಬಾಳ್ದಪೆವ್ | ಬಾಳ್ದೆವ್ | ಬಾಳ್ವೆವ್ | ಬಾಳೆವ್ | ಬಾಳ್ವಾ |
| | ಮಧ್ಯಮ. | ಬಾಳ್ದಪಿರ್ | ಬಾಳ್ದಿರ್ | ಬಾಳ್ವಿರ್ | ಬಾಳರಿ | ಬಾಳಿ, ಬಾಳ್ವುದು |
| | ಪ್ರ. ಪು. ಸ್ತ್ರೀ. | ಬಾಳ್ದಪರ್ | ಬಾಳ್ದರ್ | ಬಾಳ್ವರ್ | ಬಾಳರ್ | ಬಾಳ್ಗೆ ಬಾಳಲಿ |
| | ನಪುಂ. | ಬಾಳ್ದಪವ್ | ಬಾಳ್ದವ್ | ಬಾಳ್ವವ್ | ಬಾಳವ್ | |

# ಹಳೆಗನ್ನಡ ಉಕಾರಾಂತಧಾತುವಿನ ಕ್ರಿಯಾಮಾಲೆ.

ತಿದ್ದು ಧಾತು.

| | | | | | | |
|---|---|---|---|---|---|---|
| ಅವ್ಯಯರೂಪಗಳು. | ಭಾವರೂಪ. | ತಿದ್ದ, ತಿದ್ದಲ್ (ತಿದ್ದ), ತಿದ್ದಲ್ಕೆ. | | | | |
| | ಕಾಲ ಮತ್ತು ಅರ್ಥ ವಿಶೇಷಗಳು. | ವರ್ತಮಾನ | ಭೂತ | ಭವಿಷ್ಯತ್ | ನಿಷೇಧ | ವಿಧಿ |
| | ನ್ಯೂನರೂಪ. | ತಿದ್ದುತ್ತೆ | ತಿದ್ದಿದು, ಯೆ | | ತಿದ್ದದೆ | |
| ನಾಮರೂಪಗಳು. | ಕೃದ್ವಾಚಿ | ತಿದ್ದುವ | ತಿದ್ದಿದ | ತಿದ್ದುವ | ತಿದ್ದದ | |
| | ಕೃದ್ನಾಮ (ಕ್ರಿನಾಮ) | ತಿದ್ದುವಂ, ವಳ್, ವದು. | ತಿದ್ದಿದಂ, ದಳ್, ದದು | ತಿದ್ದುವಂ, ವಳ್, ವದು, | ತಿದ್ದದಂ, ದಳ್, ದದು, | |
| ಪುರುಷರೂಪಗಳು. ಏಕವಚನ. | ಉತ್ತಮ. | ತಿದ್ದಿದಪೆಂ, ನ್. | ತಿದ್ದಿದೆಂ, ನ್. | ತಿದ್ದುವೆಂ, ನ್. | ತಿದ್ದೆಂ, ನ್. | ತಿದ್ದುವೆ, ತಿದ್ದಲಿ. |
| | ಮಧ್ಯಮ. | ತಿದ್ದಿದಪೆಯ್ | ತಿದ್ದಿದೆಯ್ | ತಿದ್ದುವೆಯ್ | ತಿದ್ದೆಯ್ | ತಿದ್ದು, ತಿದ್ದುವುದು. |
| | ಪ್ರಥಮ. ಪು. | ತಿದ್ದಿದಪಂ, ನ್. | ತಿದ್ದಿದಂ, ನ್. | ತಿದ್ದುವಂ, ನ್. | ತಿದ್ದಂ, ನ್. | ತಿದ್ದುಗೆ, ತಿದ್ದಲಿ. (ಪು., ಸ್ತ್ರೀ., ನಪುಂ.) |
| | ಸ್ತ್ರೀ. | ತಿದ್ದಿದಪಳ್ | ತಿದ್ದಿದಳ್ | ತಿದ್ದುವಳ್ | ತಿದ್ದಳ್ | |
| | ನಪುಂ. | ತಿದ್ದಿದಪುದು | ತಿದ್ದಿದುದು | ತಿದ್ದುವುದು | ತಿದ್ದದು | |
| ಬಹುವಚನ. | ಉತ್ತಮ. | ತಿದ್ದಿದಪೆವ್ | ತಿದ್ದಿದೆವ್ | ತಿದ್ದುವೆವ್ | ತಿದ್ದೆವ್ | ತಿದ್ದುವಾ, ತಿದ್ದಲಿ. |
| | ಮಧ್ಯಮ. | ತಿದ್ದಿದಪಿರ್ | ತಿದ್ದಿದಿರ್ | ತಿದ್ದುವಿರ್ | ತಿದ್ದರಿ | ತಿದ್ದಿ, ತಿದ್ದುವುದು. |
| | ಪ್ರ. ಪು. ಸ್ತ್ರೀ. | ತಿದ್ದಿದಪರ್ | ತಿದ್ದಿದರ್ | ತಿದ್ದುವರ್ | ತಿದ್ದರ್ | ತಿದ್ದುಗೆ, ತಿದ್ದಲಿ. (ಪ್ರ. ಪು. ಸ್ತ್ರೀ., ನಪುಂ.) |
| | ನಪುಂ. | ತಿದ್ದಿದಪವ್ | ತಿದ್ದಿದವ್ | ತಿದ್ದುವವ್ | ತಿದ್ದವ್ | |

# ಹಳೆಗನ್ನಡು ಅ, ಇ, ಎ, ಏ ಓ ಕಾರಾಂತ ಧಾತುಗಳ ಕ್ರಿಯಾಮಾಲೆ.

ನುಡಿ ಧಾತು.

| | | | | | | | |
|---|---|---|---|---|---|---|---|
| ಅವ್ಯಯ ಕೃದಂತ ರೂಪಗಳು | | ಭಾವ ರೂಪ | ನುಡಿಯ, | ನುಡಿಯಲ್ (ನುಡಿಯೆ), | ನುಡಿಯಲ್ಕೆ. | | |
| | | ಕಾಲ ಮತ್ತು ಅರ್ಥವಿಶೇಷಗಳು | ವರ್ತಮಾನ | ಭೂತ | ಭವಿಷ್ಯತ್ | ನಿಷೇಧ | ವಿಧಿ. |
| | | ನ್ಯೂನ ರೂಪ | ನುಡಿಯುತ್ತೆ | ನುಡಿದಿದು, ದಿಯೆ | | ನುಡಿಯದೆ | |
| ನಾಮ ಕೃದಂತ ರೂಪಗಳು | | ಕೃದ್ವಾಚಿ. | ನುಡಿಯುವ | ನುಡಿದ | ನುಡಿಯುವ | ನುಡಿಯದ | |
| | | ಕೃನ್ನಾಮ (ಕ್ರಿಯಾನಾಮ) | ನುಡಿಯುವಂ, ವಳ್, ವದು | ನುಡಿದಂ, ನುಡಿದಳ್, ನುಡಿದದು | ನುಡಿವಂ, ನುಡಿವಳ್, ವದು | ನುಡಿಯದಂ, ದಳ್, ದದು. | |
| ಸಮಾಪಕ ರೂಪಗಳು | ಏಕವಚನ | ಉತ್ತಮ. | ನುಡಿದಪೆಂ, ನ್ | ನುಡಿದೆಂ, ನ್ | ನುಡಿವೆಂ, ನ್ | ನುಡಿಯೆಂ, ನ್ | ನುಡಿವೆ (ನುಡಿಯಲಿ) |
| | | ಮಧ್ಯಮ. | ನುಡಿದಪೆಯ್ | ನುಡಿದೆಯ್ | ನುಡಿವೆಯ್ | ನುಡಿಯಯ್ | ನುಡಿ (ನುಡಿವುದು) |
| | | ಪ್ರಥಮ ಪು. | ನುಡಿದಪಂ, ನ್ | ನುಡಿದಂ, ನ್ | ನುಡಿವಂ, ನ್ | ನುಡಿಯಂ, ನ್ | ನುಡಿಗೆ (ನುಡಿಯಲಿ) |
| | | ಸ್ತ್ರೀ. | ನುಡಿದಪಳ್ | ನುಡಿದಳ್ | ನುಡಿವಳ್ | ನುಡಿಯಳ್ | ,, ,, |
| | | ನಪುಂ. | ನುಡಿದಪುದು | ನುಡಿದುದು, ದತ್ತು | ನುಡಿವುದು | ನುಡಿಯದು | ,, ,, |
| | ಬಹುವಚನ | ಉತ್ತಮ. | ನುಡಿದಪೆವ್ | ನುಡಿದೆವ್ | ನುಡಿವೆವ್ | ನುಡಿಯೆವ್ | ನುಡಿವಾ, ನುಡಿಯಲಿ) |
| | | ಮಧ್ಯಮ. | ನುಡಿದಪಿರ್ | ನುಡಿದಿರ್ | ನುಡಿವಿರ್ | ನುಡಿಯರಿ | ನುಡಿರಿ (ನುಡಿವುದು) |
| | | ಪ್ರ. ಪು. ಸ್ತ್ರೀ. | ನುಡಿದಪರ್ | ನುಡಿದರ್ | ನುಡಿವರ್ | ನುಡಿಯರ್ | ನುಡಿಗೆ (ನುಡಿಯಲಿ) |
| | | ನಪುಂ. | ನುಡಿದಪವ್ | ನುಡಿದವ್ | ನುಡಿವವ್ | ನುಡಿಯವ್ | ,, ,, |

ಉಳಿದ ಅ, ಎ, ಏ, ಓ ಕಾರಾಂತ ಧಾತುಗಳ ಕ್ರಿಯಾಮಾಲೆ ಕೂಡ ಮೇಲಿನಂತೆಯೇ ಎಂದು ತಿಳಕೊಳ್ಳ ತಕ್ಕದ್ದು.

## ವಿಕೃತ ಭೂತ ರೂಪಗಳು.

| ಧಾತು | ಭೂತ ನ್ಯೂನ | ಭೂತಕೃದ್ವಾಚಿ | ಭೂತನಪುಂಸಕೈಕವಚನ. | ಸಮಾನವಾಗಿ ರೂಪಗಳನ್ನು ಹೊಂದುವ ಧಾತುಗಳು. |
|---|---|---|---|---|
| 1 ಅಡು | ಅಟ್ಟು | ಅಟ್ಟ | ಅಟ್ಟಿತು | ಅಡು, ಪಡು, ಬಿಡು, ಕೊಡು, ಸುಡು, ಉಡು, ಕೆಡು, ತೊಡು, ಇಡು, ಮಡು, ನಡು, ಹಡು. |
| 2 ಅರಿ | ಅರಿತು | ಅರಿತ | ಅರಿಯಿತು | ಅರಿ, ಮರೆ, ಕುರಿ, ಕಲಿ, ಬಲಿ, ಕೊಳೆ, ಮಲೆ, ಕಳೆ, ಚಳಿ, ಮೊಳೆ, ಅವಿ. |
| 3 ಉಣ್ಣು | ಉಂಡು | ಉಂಡ | ಉಂಡಿತು | ಉಣ್ಣು, ಕಾಣು, ಕೊಳ್ಳು. |
| 4 ತಿನ್ನು | ತಿಂದು | ತಿಂದ | ತಿಂದಿತು | ತಿನ್ನು, ಅನ್ನು, ಎನ್ನು, ಕೊಲ್ಲು, ಸೋ, ಬೇ, ಮಿ. |
| 5 ಸೀನು | ಸೀತು | ಸೀತ | ಸೀತಿತು | ಸೀನು, ಸೋನು, ಆನು, ಜೋಲು, ಸೇಲು, ನೂಲು, ಸೋಲು, ಹೋಲು, ಸಾಲು, ಹೇಲು, ಕೂರು, ಬಾ, ಬೀ, ಕೀ, ಹೂ. |
| 6 ತರು | ತಂದು | ತಂದ | ತಂದಿತು (ತಂತು) | ತರು, ಬರು, ಸಲ್ಲು. |
| 7 ತಳರು | ತಳರ್ತು | ತಳರ್ತ | ತಳರ್ತಿತು | ತಳರು, ಬೆವರು, ಚಿಗುರು, ಕೊನರು, ಮಿಳರು, ಮಡಲು, ಕವಲು. |

| | | | | |
|---|---|---|---|---|
| 8 ಕದಿ | ಕದ್ದು | ಕದ್ದ | ಕದ್ದಿತು | ಕದಿ, ಒದೆ, ಹೊದಿ, ಏಳು, ಕಳು, ಗೆಲ್ಲು, ಮೆಲ್ಲು. |
| 9 ಇರು | ಇದ್ದು | ಇದ್ದ | ಇತ್ತು | ಇರು, ಬೀಳು. |
| 10 ತೆರು | ತೆತ್ತು | ತೆತ್ತ | ತೆತ್ತಿತು | ತೆರು, ಹೊರು, ಹೆರು, ಉಳು, ಅಳು, ಕೀಳು, ಮಿಡಿ, ಈ, ಸಾ. |
| 11 ಬೇಸರು | ಬೇಸತ್ತು | ಬೇಸತ್ತ | ಬೇಸತ್ತಿತು | ಬೇಸರು, ಆಸರು, ಎಚ್ಚರು. |
| 12 ಆಗು | ಆಗಿ | ಆದ | ಆಯಿತು | ಆಗು, ಹೋಗು. |
| 13 ಮಿಗು | ಮಿಕ್ಕು | ಮಿಕ್ಕ | ಮಿಕ್ಕಿತು | ಮಿಗು, ಉಗು, ನಗು, ಹೊಗು, ಬಿಗು. |
| 14 ಈನು | ಈದು | ಈದ | ಈದಿತು | ಈನು, ತೇ, ಮೇ, ಕಾ. |
| 15 ಬಿಸಾಡು | ಬಿಸಾಟು | ಬಿಸಾಟ | ಬಿಸಾಟಿತು | ಬಿಸಾಡು, ಬಿಸುಡು, ಹೊರಡು. |

## ವಿಕೃತ ಭವಿಷ್ಯದ್ರೂಪಗಳು.

| ಧಾತು | ಭವಿಷ್ಯತ್ ಕೃದ್ವಾಚಿಗಳು | ಭವಿಷ್ಯತ್ ಪುರುಷಾತ್ಮಕ ರೂಪಗಳು |
|---|---|---|
| ಅನ್ನು | ಅಂಬ, ಅಂಬುವ | ಅಂಬೆನು, ಅಂಬುವೆನು ಇತ್ಯಾದಿ |
| ಎನ್ನು | ಎಂಬ, ಎಂಬುವ | ಎಂಬೆನು, ಎಂಬುವೆನು ,, |
| ಕಾಣು | ಕಾಂಬ, ಕಾಂಬುವ | ಕಾಂಬೆನು, ಕಾಂಬುವೆನು ,, |
| ಉಣ್ಣು | ಉಂಬ, ಉಂಬುವ | ಉಂಬೆನು, ಉಂಬುವೆನು ,, |
| ಕೊಳ್ಳು | ಕೊಂಬ, ಕೊಂಬುವ | ಕೊಂಬೆನು, ಕೊಂಬುವೆನು ,, |
| ತಿನ್ನು | ತಿಂಬ, ತಿಂಬುವ | ತಿಂಬೆನು, ತಿಂಬುವೆನು ,, |

## ವಿಕೃತ ನಿಷೇಧ ರೂಪಗಳು.

| ಧಾತು | ನಿಷೇಧ ನ್ಯೂನಗಳು | ನಿಷೇಧ ಕೃದ್ವಾಚಿಗಳು | ನಿಷೇಧ ಪುರುಷಾತ್ಮಕ ರೂಪಗಳು |
|---|---|---|---|
| ತರು | ತಾರದೆ | ತಾರದ | ತಾರೆನು, ತಾರೆ ಇತ್ಯಾದಿ |
| ಬರು | ಬಾರದೆ | ಬಾರದ | ಬಾರೆನು, ಬಾರೆ ಇತ್ಯಾದಿ |

## ವಿಕೃತ ಮಧ್ಯಮಪುರುಷ ವಿಧಿರೂಪಗಳು.

| ಧಾತು | ಏಕವಚನ | ಬಹುವಚನ |
|---|---|---|
| ತರು. | ತಾ. | ತನ್ನಿ, ತನ್ನಿರಿ. |
| ಬರು. | ಬಾ. | ಬನ್ನಿ, ಬನ್ನಿರಿ. |

82. ಮೇಲೆ ಹೇಳಿದ ವಿಕೃತ ಕ್ರಿಯಾಪದಗಳಲ್ಲಿ "ಇರು" ಧಾತುವಿಗೆ ಬೇರೆ ಧಾತುಗಳಿಗಿಂತ ಹೆಚ್ಚಾದ ವಿಕೃತಿಗಳು ಬರುತ್ತವೆ; ಅವುಗಳನ್ನು ಈ ಕೆಳಗಿನ ಕ್ರಿಯಾಮಾಲೆಯಿಂದ ತಿಳಿದು ಕೊಳ್ಳ ತಕ್ಕದ್ದು.

## ಇರು ಧಾತುವಿನ ಪುರುಷಾತ್ಮಕ ಕ್ರಿಯಾವಾಲೆ.

| | ಸರ್ವನಾಮಗಳು | | ವರ್ತಮಾನ | | ಭೂತ | ಭವಿಷ್ಯತ್ | ಭಾವಿ | ನಿಷೇಧ | ವಿಧಿ |
|---|---|---|---|---|---|---|---|---|---|
| | | | ಹೊಸಗನ್ನಡ | ಹಳೆಗನ್ನಡ | | | | | |
| ಏಕವಚನ | ಉತ್ತಮ. | ನಾನು | ಇರುತ್ತೇನೆ | ಇದ್ಧೇನೆ | ಇಹೆನು | ಇದ್ದೆನು | ಇದ್ದೇನು | ಇರುವೆನು | ಇರೆನು | ಇರುವ, ಇರಲಿ |
| | ಮಧ್ಯಮ. | ನೀನು | ಇರುತ್ತೀ | ಇದ್ಧೀ | ಇಹೆ | ಇದ್ದೆ | ಇದ್ದೀ | ಇರುವಿ, ವೆ | ಇರಿ, ರೆ | ಇರು, ಇರುವದು. |
| | ಪ್ರಥಮ,ಪು. | ಅವನು | ಇರುತ್ತಾನೆ | ಇದ್ಧಾನೆ | ಇಹನು | ಇದ್ದನು | ಇದ್ದಾನು | ಇರುವನು | ಇರನು | ಇರಲಿ |
| | ಸ್ತ್ರೀ. | ಅವಳು | ಇರುತ್ತಾಳೆ | ಇದ್ಧಾಳೆ | ಇಹಳು | ಇದ್ದಳು | ಇದ್ದಾಳು | ಇರುವಳು | ಇರಳು | |
| | ನಪುಂ. | ಅದು | ಇರುತ್ತದೆ | ಇದೆ, ಅಧೆ | ಇಹುದು | ಇತ್ತು | ಇದ್ದೀತು | ಇರುವದು | ಇರದು | |
| ಬಹುವಚನ | ಉತ್ತಮ. | ನಾವು | ಇರುತ್ತೇವೆ | ಇದ್ಧೇವೆ | ಇಹೆವು | ಇದ್ದೆವು | ಇದ್ದೇವು | ಇರುವೆವು | ಇರವು | ಇರುವಾ, ಇರೋಣ |
| | ಮಧ್ಯಮ. | ನೀವು | ಇರುತ್ತೀರಿ | ಇದ್ಧೀರಿ | ಇಹಿರಿ | ಇದ್ದಿರಿ | ಇದ್ದೀರಿ | ಇರುವಿರಿ | ಇರರಿ | ಇರಿ, ಇರುವದು |
| | ಪ್ರ.ಪುಂ, ಸ್ತ್ರೀ. | ಅವರು | ಇರುತ್ತಾರೆ | ಇದ್ಧಾರೆ | ಇಹರು | ಇದ್ದರು | ಇದ್ದಾರು | ಇರುವರು | ಇರರು | ಇರಲಿ |
| | ನಪುಂ. | ಅವು, ಗಳು | ಇರುತ್ತವೆ | ಇದ್ಧಾವೆ, ಇವೆ, ಅವೆ | ಇಹವು | ಇದ್ದವು | ಇದ್ದೀವು | ಇರುವವು | ಇರವು | |

## ಸಂಯುಕ್ತ ಕ್ರಿಯಾಪದಗಳು.

83. ಧಾತುಗಳ ನ್ಯೂನರೂಪಗಳಿಗೆ ಇರು ಧಾತುವಿನ ಬೇರೆ ಬೇರೆ ರೂಪಗಳನ್ನು ಕೂಡಿಸುವದರಿಂದ ಸಂಯುಕ್ತ ಕ್ರಿಯಾಪದಗಳು ಆಗುವವು. ಉದಾ: ಮಾಡುತ್ತಿರಲು, ಮಾಡುತ್ತಿರುತ್ತಾ, ಮಾಡದಿದ್ದ, ಮಾಡಿದ್ದವನು, ಮಾಡುತ್ತಿರುತ್ತೇನೆ, ಮಾಡಿರುತ್ತೇನೆ, ಮಾಡದಿರುತ್ತೇನೆ ಇತ್ಯಾದಿ.

ಇದಲ್ಲದೆ ಧಾತುಗಳ ನ್ಯೂನ ರೂಪಗಳ ಮೇಲೆ ಈ ಪ್ರಕಾರ ಇರು ಧಾತು ಸಂಯುಕ್ತವಾಗುವದರಿಂದ ಕೆಲವು ಸಂಯುಕ್ತ ಭೂತ ರೂಪಗಳು ಆಗುತ್ತವೆ. ಹ್ಯಾಗಂದರೆ:—

1. ಧಾತುಗಳ ಭೂತ ನ್ಯೂನಗಳಿಗೆ ಇರು ಧಾತುವಿನ ವರ್ತಮಾನ ರೂಪಗಳನ್ನು ಕೂಡಿಸುವದರಿಂದ ಸಮಾಪ್ತ ಭೂತ ರೂಪಗಳು ಆಗುತ್ತವೆ. ಉದಾ: ಮಾಡಿರುತ್ತಾನೆ, ಮಾಡಿದ್ದಾನೆ, ಮಾಡಿದ್ದಾಳೆ ಇತ್ಯಾದಿ.

2. ಧಾತುಗಳ ಭೂತ ನ್ಯೂನಗಳಿಗೆ ಇರು ಧಾತುವಿನ ಭೂತ ರೂಪಗಳನ್ನು ಕೂಡಿಸುವದರಿಂದ ಅತೀತ ಭೂತರೂಪಗಳು ಆಗುತ್ತವೆ. ಉದಾ: ಮಾಡಿದ್ದೆನು, ಮಾಡಿದ್ದನು, ಮಾಡಿದ್ದಳು ಇತ್ಯಾದಿ.

3. ಧಾತುಗಳ ಭೂತ ನ್ಯೂನಗಳಿಗೆ ಇರು ಧಾತುವಿನ ಭವಿಷ್ಯತ್, ಭಾವಿ ರೂಪಗಳನ್ನು ಕೂಡಿಸುವದರಿಂದ ಅಪರೋಕ್ಷ ಭೂತ ರೂಪಗಳು ಆಗುತ್ತವೆ. ಉದಾ: ಮಾಡಿರುವೆನು, ಮಾಡಿದ್ದೇನು ಮಾಡಿದ್ದಾಳು ಇತ್ಯಾದಿ.

4. ಧಾತುಗಳ ಭೂತ ನ್ಯೂನಗಳಿಗೆ ವರ್ತಮಾನ ಪುರುಷ ಪ್ರತ್ಯಯಗಳನ್ನು ಕೂಡಿಸುವದರಿಂದ ಗ್ರಾಮ್ಯ ಪ್ರಯೋಗದ ಭೂತರೂಪಗಳು ಆಗುತ್ತವೆ; ಇಂಥ ರೂಪಗಳು ಸಂಯುಕ್ತ ಕ್ರಿಯಾಪದಗಳೆಂತಲೇ ತಿಳಿಯತಕ್ಕದ್ದು. ಉದಾ: ಮಾಡ್ಯೇನೆ, ಮಾಡ್ಯಾನೆ, ಮಾಡ್ಯಾಳೆ ಇತ್ಯಾದಿ.

## ಊನ ಕ್ರಿಯಾಪದಗಳು.

84. ಕ್ರಮವಾದ ಧಾತುವೂ, ಸಂಪೂರ್ಣವಾದ ಕ್ರಿಯಾಮಾಲೆಯೂ, ಇಲ್ಲದ ಕ್ರಿಯಾಪದಗಳಿಗೆ ಊನ ಕ್ರಿಯಾಪದಗಳೆಂಬ ಹೆಸರು. ಅವುಗಳಲ್ಲಿ ಆಖ್ಯಾತ ಪ್ರತ್ಯಯಗಳುಳ್ಳವುಗಳು ಆಖ್ಯಾತ ಊನ ಕ್ರಿಯಾಪದಗಳೆಂತಲೂ, ಆಖ್ಯಾತಪ್ರತ್ಯಯಗಳಿಲ್ಲದವುಗಳು ಅವ್ಯಯ ಊನ ಕ್ರಿಯಾಪದಗಳೆಂತಲೂ, 2 ವಿಧ. ಉದಾ:

## ಆಖ್ಯಾತ ಊನಕ್ರಿಯಾಪದಗಳು.

| | | | | | | |
|---|---|---|---|---|---|---|
| ಏಕವಚನ | ಉತ್ತಮ. | ಆಪೆನು | ಆರೆನು | ಒಲ್ಲೆನು | ಬಲ್ಲೆನು | ಅಮ್ಮೆನು |
| | ಮಧ್ಯಮ. | ಆಪೆ, ಆಪಿ | ಆರೆ, ಆರಿ | ಒಲ್ಲೆ, ಒಲ್ಲಿ | ಬಲ್ಲೆ, ಬಲ್ಲಿ | ಅಮ್ಮೆ, ಅಮ್ಮಿ |
| | ಪ್ರಥಮ. ಪು. | ಆಪನು | ಆರನು | ಒಲ್ಲನು | ಬಲ್ಲನು | ಅಮ್ಮನು |
| | ಸ್ತ್ರೀ. | ಆಪಳು | ಆರಳು | ಒಲ್ಲಳು | ಬಲ್ಲಳು | ಅಮ್ಮಳು |
| | ನಪುಂ. | ಆಪದು | ಆರದು | ಒಲ್ಲದು | ಬಲ್ಲದು | ಅಮ್ಮದು |
| ಬಹುವಚನ | ಉತ್ತಮ. | ಆಪೆವು | ಆರೆವು | ಒಲ್ಲೆವು | ಬಲ್ಲೆವು | ಅಮ್ಮೆವು |
| | ಮಧ್ಯಮ. | ಆಪಿರಿ | ಆರಿರಿ | ಒಲ್ಲಿರಿ | ಬಲ್ಲಿರಿ | ಅಮ್ಮಿರಿ |
| | ಪ್ರ. ಪುಂ. ಸ್ತ್ರೀ. | ಆಪರು | ಆರರು | ಒಲ್ಲರು | ಬಲ್ಲರು | ಅಮ್ಮರು |
| | ನಪುಂ. | ಆಪವು | ಆರವು | ಒಲ್ಲವು | ಬಲ್ಲವು | ಅಮ್ಮವು |
| ನ್ಯೂನ ರೂಪ | | ಆಪದೆ | ಆರದೆ | ಒಲ್ಲದೆ | ಬಲ್ಲದೆ | ಅಮ್ಮದೆ |
| ಕೃದ್ವಾಚಿ | | ಆಪ, ಆಪದ | ಆರದ | ಒಲ್ಲದ | ಬಲ್ಲ, ಬಲ್ಲದ | ಅಮ್ಮದ |
| ಕೃದ್ನಾಮ | | ಆಪವನು, ಆಪದವನು | ಆರದವನು | ಒಲ್ಲದವನು | ಬಲ್ಲವನು, ಬಲ್ಲದವನು | ಅಮ್ಮದ |
| ಕ್ರಿಯಾನಾಮ | | ಆಪದು, ಆಪದ್ದು | ಆರದ್ದು | ಒಲ್ಲದ್ದು | ಬಲ್ಲದ್ದು, ಬಲ್ಲದದ್ದು | ಅಮ್ಮದ್ದು |

## ಅವ್ಯಯ ಊನಕ್ರಿಯಾಪದಗಳು.

ಬೇಕು, ಬೇಡ, ಉಂಟು, ಇಲ್ಲ, (ಇಲ್ಲದೆ, ಇಲ್ಲದ) ಬಹುದು, ಬಾರದು, ಅಹುದು, ಅಲ್ಲ, (ಅಲ್ಲದೆ ಅಲ್ಲದ) ಸಾಕು, ಸಾಲದು, ಕೂಡುವದು, ಕೂಡದು, ತಕ್ಕ, ಉಳ್ಳ ಇತ್ಯಾದಿ.

85. ಮೇಲೆ ಹೇಳಿದ ಎಲ್ಲಾ ಊನಕ್ರಿಯಾಪದಗಳು ಬೇರೆ ಧಾತುಗಳ ಭಾವರೂಪಗಳ ಮೇಲೆ ಸಹಾಯ ಕ್ರಿಯಾಪದಗಳಾಗಿ ಸೇರುವಕಾರಣ ಅನುಬಂಧ ಕ್ರಿಯಾಪದಗಳೆನ್ನಿಸಿ ಕೊಳ್ಳುತ್ತವೆ; ಇವುಗಳ ಅನುಬಂಧನೆಯಿಂದ ಉಂಟಾದ ಕ್ರಿಯಾಪದಗಳಿಗೆ ಸಾನುಬಂಧ ಕ್ರಿಯಾಪದಗಳೆಂಬ ಹೆಸರು. ಉದಾ: ಕೊಡಲಾರೆನು, ಮಾಡಬಹುದು, ನೋಡಬೇಕು, ಹೋಗಲಮ್ಮೆನು, ಇವುಗಳೆಲ್ಲಾ ಸಾನುಬಂಧ ಕ್ರಿಯಾಪದಗಳು.

86. ಊನಕ್ರಿಯಾಪದಗಳು ಧಾತುಗಳ ಭಾವರೂಪಗಳ ಮೇಲೆ ಸೇರುವ ಹಾಗೆಯೇ ಕೊಳ್ಳು, ಕೊಡು, ಆಡು, ಬಿಡು, ಇಡು, ಬರು, ಹೋಗು, ಹಾಕು, ಎಂಬ ಧಾತುಗಳು ಬೇರೆ ಧಾತುಗಳ ಭೂತನ್ಯೂನಗಳ ಮೇಲೆ ಸಹಾಯ ಕ್ರಿಯಾಪದಗಳಾಗಿ ಸೇರಿ ನಾನಾ ಅರ್ಥಗಳನ್ನು ಕೊಡುತ್ತವೆ; ಅಂಥ ಸಹಾಯ ಕ್ರಿಯಾಪದಗಳಿಗೆ ಉಪಕ್ರಿಯಾಪದಗಳೆಂದೂ, ಅವುಗಳ ಜೋಡಣೆಯಿಂದ ಉಂಟಾದ ಕ್ರಿಯಾಪದಗಳಿಗೆ ಉಪಕ್ರಿಯಾಸಂಯುಕ್ತ ಕ್ರಿಯಾಪದಗಳೆಂದೂ, ಹೆಸರು. ಉದಾ: ಬರೆದುಕೊಳ್ಳು, ಬರೆದುಕೊಡು, ಹೊಡೆದಾಡು, ಬಿಟ್ಟುಬಿಡು, ಕಟ್ಟಿಇಡು. ಆಳಿಬರು, ಕೆಟ್ಟುಹೋಗು, ಬಿಚ್ಚಿಹಾಕು ಇತ್ಯಾದಿ.

## IV ವಿಶೇಷಣಪದ.

87. ವಸ್ತುಗಳನ್ನು ವಿಶೇಷಿಸುವ ಪದಗಳಿಗೆ ವಿಶೇಷಣ ಪದಗಳೆಂಬ ಹೆಸರು. ಈ ಪ್ರಕಾರ ವಿಶೇಷಿಸಲ್ಪಡುವ ವಸ್ತುವಿಗೆ ವಿಶೇಷ್ಯಪದವೆಂಬ ಹೆಸರು; ವಿಶೇಷಣ ಪದಗಳನ್ನು ವಿಶೇಷಿಸುವ ಪದಕ್ಕೆ ಉಪವಿಶೇಷಣವೆಂಬ ಹೆಸರು. ಉದಾ: ರಾಮನು ಒಳ್ಳೆ ಹುಡುಗನು. ಈ ವಾಕ್ಯದಲ್ಲಿ ಒಳ್ಳೆ ಎಂಬದು ವಿಶೇಷಣಪದ; ಹುಡುಗನು ಎಂಬದು ವಿಶೇಷ್ಯಪದ. ಹೆಚ್ಚು ದೊಡ್ಡ ಕುದುರೆ. ಇದರಲ್ಲಿ ಹೆಚ್ಚು ಎಂಬದು ಉಪವಿಶೇಷಣವಾಗಿರುತ್ತದೆ.

88. ವಿಶೇಷಣ ಪದಗಳಲ್ಲಿ ಗುಣವಾಚಕ, ದಿಗ್ವಾಚಕ, ಸಂಖ್ಯಾವಾಚಕ, ಸರ್ವನಾಮಕ ಮತ್ತು ಕೃದ್ವಾಚಕ ವಿಶೇಷಣಗಳೆಂಬ 5 ವಿಧ ಉಂಟು. ಹ್ಯಾಗಂದರೆ:—

## 1 ಗುಣವಾಚಕ ವಿಶೇಷಣ.

89. ವಸ್ತುಗಳ ಗುಣಗಳನ್ನು ವಿಶೇಷಿಸುವ ಪದಗಳಿಗೆ ವಿಶೇಷಣ ಪದಗಳೆಂಬ ಹೆಸರು. ಉದಾ: ಒಳ್ಳೆ ಹುಡುಗ, ಚಿಕ್ಕ ಹುಡುಗಿ, ಸಣ್ಣ ಮನೆ, ಉತ್ತಮ ಮನುಷ್ಯ, ಶ್ರೇಷ್ಟ ಲೋಕ ಇತ್ಯಾದಿ.

90. ಸಂಸ್ಕೃತದಿಂದ ಕನ್ನಡದಲ್ಲಿ ಸೇರಿದ ಗುಣವಾಚಕಗಳಿಗೆ ಸ್ವಾಭಾವಿಕ ಲಕ್ಷಣವನ್ನು ವರ್ಣಿಸುವ ನೈಜ ಸ್ಥಿತಿಯೆಂತಲೂ, ಅಧಿಕ ಲಕ್ಷಣವನ್ನು ವರ್ಣಿಸುವ ತರ ಸ್ಥಿತಿಯೆಂತಲೂ ಅತ್ಯಧಿಕ ಲಕ್ಷಣವನ್ನು ವರ್ಣಿಸುವ ತಮಸ್ಥಿತಿ ಎಂತಲೂ 3 ಸ್ಥಿತಿಗಳು ಉಂಟು. ನೈಜಸ್ಥಿತಿಗೆ ತರ ಮತ್ತು ತಮ ಅಥವಾ ಅತಿ ಮತ್ತು ಅತ್ಯಂತ ಎಂಬ ಪ್ರತ್ಯಯಗಳನ್ನು ಕೂಡಿಸುವದರಿಂದ ತರ ಮತ್ತು ತಮ ಸ್ಥಿತಿಗಳು ಆಗುವವು; ಆದರೆ ತರ ತಮಗಳು ಗುಣವಾಚಕಗಳ ಅಂತ್ಯದಲ್ಲಿಯೂ ಅತಿ ಅತ್ಯಂತಗಳು ಆದಿಯಲ್ಲಿಯೂ ಸೇರುವವು. ಉದಾ: ನೈಜ ಸ್ಥಿತಿ=ಶುಭ. ತರ ಸ್ಥಿತಿ=ಶುಭತರ ಅಥವಾ ಅತಿ ಶುಭ. ತಮ ಸ್ಥಿತಿ=ಶುಭತಮ ಅಥವಾ ಅತ್ಯಂತಶುಭ ಇತ್ಯಾದಿ.

91. ಮೇಲಿನ ಉದಾಹರಣೆಗಳಿಂದ ಕಾಣುವ ಹಾಗಿನ ಸಿದ್ಧ ಗುಣವಾಚಕಗಳಲ್ಲದೆ ಸಂಸ್ಕೃತ ಪ್ರಕೃತಿಗಳಿಗೆ ಬೇರೆ ಬೇರೆ ಪ್ರತ್ಯಯಗಳನ್ನು ಕೂಡಿಸುವದರಿಂದ ಕೆಲವು ವ್ಯುತ್ಪನ್ನ ಗುಣವಾಚಕಗಳು ಆಗುತ್ತವೆ. ಹ್ಯಾಗಂದರೆ:—

I. ಈಯ, ಕ, ಮಯ, ಈನ, ವಲ, ತನ, ದಘ್ನ, ಮಾತ್ರ, ಕಲ್ಪ ಮುಂತಾದ ಪ್ರತ್ಯಯಗಳನ್ನು ಕೂಡಿಸುವದರಿಂದ (ಈಯ ಪ್ರತ್ಯಯ ಕೂಡುವಲ್ಲಿ ಕೆಲವು ಸಾರಿ ಮಧ್ಯದಲ್ಲಿ ಕ ಕಾರಾಗಮ ಬರುವದು.) ಉದಾ: ದೇಶ—ದೇಶೀಯ, ಆತ್ಮ—ಆತ್ಮೀಯ, ಸ್ವ—ಸ್ವಕೀಯ, ಪರ—ಪರಕೀಯ, ಗುಣ—ಗುಣಕ, ದೋಷ—ದೋಷಕ, ರತ್ನ—ರತ್ನಮಯ, ಪ್ರಕಾಶ—ಪ್ರ

ಕಾಶಮಯ, ರಥ—ರಥೀನ, ಗ್ರಾಮ—ಗ್ರಾಮೀಣ, ಶಿಖಾ—ಶಿಖಾವಲ, ಪ್ರಾಕ್—ಪ್ರಾಕ್ತನ, ಜಾನು—ಜಾನುದಘ್ನ, ಕ್ಷಣ—ಕ್ಷಣಮಾತ್ರ, ಅಣು—ಅಣುಮಾತ್ರ, ಕವಿ—ಕವಿಕಲ್ಪ, ಅಗ್ನಿ—ಅಗ್ನಿಕಲ್ಪ ಇತ್ಯಾದಿ.

II. ಇ, ಈ, ಉ ಕಾರಾಂತ ಪ್ರಕೃತಿಗಳಿಗೆ ಮತ್ ಎಂಬ ಪ್ರತ್ಯಯವನ್ನು ಕೂಡಿಸುವದರಿಂದ. ಉದಾ: ಶ್ರೀ—ಶ್ರೀಮತ್, ಕೀರ್ತಿ—ಕೀರ್ತಿಮತ್, ಅಂಶು—ಅಂಶುಮತ್ ಇತ್ಯಾದಿ.

III. ಪ್ರಕೃತಿ ಶಬ್ದಗಳ ಆದ್ಯಕ್ಷರವನ್ನು ವೃದ್ಧಿ ಮಾಡಿ ಅವುಗಳಿಗೆ ಅ, ಇಕ ಎಂಬ ಪ್ರತ್ಯಯಗಳನ್ನು ಕೂಡಿಸುವದರಿಂದ. (ಅಕಾರಾಂತ ಪ್ರಕೃತಿಯಾಗಿದ್ದರೆ ಅಂತ ಸ್ವರವೇ ಪ್ರತ್ಯಯವೆಂದು ತಿಳಿಯ ಬೇಕು, ಮತ್ತು ಆದ್ಯಕ್ಷರಗಳಲ್ಲಿ ಅಕಾರ ಸೇರಿದ್ದಕ್ಕೆ ಆಕಾರವೂ, ಇ, ಈ, ಏ ಕಾರಗಳು ಸೇರಿದ್ದಕ್ಕೆ ಐ ಕಾರವೂ, ಉ, ಊ, ಓ ಕಾರಗಳು ಸೇರಿದ್ದಕ್ಕೆ ಔ ಕಾರವೂ ವೃದ್ಧಿಯಾಗುವವು). ಉದಾ: ಅತಿಥಿ—ಆತಿಥ್ಯ, ಶಿವ—ಶೈವ, ಇಂದ್ರ—ಐಂದ್ರ, ಪುರ—ಪೌರ, ಭೂಮಿ—ಭೌಮ್ಯ, ಗೋ—ಗೌವ್ಯ, ಭೂತ—ಭೌತಿಕ, ಲೋಕ—ಲೌಕಿಕ ಇತ್ಯಾದಿ.

IV. ಪ್ರಕೃತಿ ಶಬ್ದಗಳ ಆದ್ಯಕ್ಷರವನ್ನು ಮೇಲೆ ಹೇಳಿದ ಪ್ರಕಾರ ವೃದ್ಧಿಮಾಡಿ, ಅಂತಸ್ವರವನ್ನು ಲೋಪಿಸಿ ಏಯ ಎಂಬ ಪ್ರತ್ಯಯವನ್ನು ಕೂಡಿಸುವದರಿಂದ. ಉದಾ. ಕುಂತಿ—ಕೌಂತೇಯ, ರಾಧಾ—ರಾಧೇಯ, ಅಗ್ನಿ—ಆಗ್ನೇಯ ಇತ್ಯಾದಿ.

92. ಗುಣವಾಚಕಗಳಿಗೆ ಕೆಲವು ಸಾರಿ ಷಷ್ಟಿ ವಿಭಕ್ತಿ ಪ್ರತ್ಯಯ ಸೇರುವದುಂಟು; ಹೀಗೆ ಸೇರಿದ್ದಲ್ಲಿ "ಆದ" ಎಂಬ ಅರ್ಥ ಕೊಡುವದು. ಉದಾ: ಕರಿಯ ಒನಕೆ=ಕರಿದಾದ ಒನಕೆ, ಒಳ್ಳೇ ವಸ್ತ್ರ=ಒಳ್ಳೆದಾದ ವಸ್ತ್ರ ಇತ್ಯಾದಿ.

## 2 ದಿಗ್ವಾಚಕ ವಿಶೇಷಣ.

93. ದಿಕ್ಕುಗಳನ್ನು ವಿಶೇಷಿಸುವ ವಿಶೇಷಣ ಪದಗಳಿಗೆ ದಿಗ್ವಾಚಕ ವಿಶೇಷಣಗಳೆಂಬ ಹೆಸರು. ಉದಾ: ಮೂಡಣ ದೇಶ, ಪಡುವಣ ಚಾವಡಿ, ಬಡಗಣ ಕೋಟೆ, ತೆಂಕಣ ಮನೆ ಇತ್ಯಾದಿ. ದಿಗ್ವಾಚಕಗಳಿಗೆ ತೃತೀಯ ವಿಭ

ಕ್ತಿ ಪ್ರತ್ಯಯವು ಸೇರಿದರೆ ಸ್ಥಾನವಾಚಕ ಕ್ರಿಯಾವಿಶೇಷಣಾವ್ಯಯಗಳಾಗುವವು. ಉದಾ: ಎತ್ತಣಿಂದ ಬಂದೆನು? ಇತ್ಯಾದಿ.

## 3 ಸಂಖ್ಯಾವಾಚಕ ವಿಶೇಷಣ.

94. ವಸ್ತುಗಳ ಸಂಖ್ಯೆಯನ್ನು ವಿಶೇಷಿಸುವ ಒಂದು, ಎರಡು, ಮೂರು, ನಾಲ್ಕು, ಹತ್ತು ಮುಂತಾದ ಅಂಕೆಗಳ ಹೆಸರುಗಳಿಗೆ ಸಂಖ್ಯಾವಾಚಕ ವಿಶೇಷಣಗಳೆಂಬ ಹೆಸರು. ಉದಾ: ಒಂದು ಮನೆ, ನಾಲ್ಕು ಮೂಲೆಗಳು, ಆರು ಗುಣಗಳು, ಹತ್ತು ಮರಗಳು ಇತ್ಯಾದಿ.

95. ಸಂಖ್ಯಾವಾಚಕಗಳಿಗೆ ಅನೆ ಎಂಬ ಪ್ರತ್ಯಯವನ್ನು ಕೂಡಿಸುವದರಿಂದ ಸಂಖ್ಯಾಪೂರ್ಣಗಳು ಅಥವಾ ಸಂಖ್ಯಾನಿರ್ದಿಷ್ಟಗಳು ಆಗುವವು. ಉದಾ: ಒಂದನೆ ಹುಡುಗ, ನಾಲ್ಕನೆ ಮನೆ, ಎಂಟನೆ ಪ್ರಶ್ನೆ ಇತ್ಯಾದಿ.

96. ಅಷ್ಟು=(ಅನಿತು, ಅನಿಸು, ಆಸು, ಅಂತುಟು), ಇಷ್ಟು=(ಇನಿತು, ಇನಿಸು, ಈಸು, ಇಂತುಟು), ಎಷ್ಟು=(ಎನಿತು, ಎನಿಸು, ಏಸು ಎಂತುಟು), ಸ್ವಲ್ಪ, ಬಹಳ, ಹಲವು, ಕೆಲವು, ಅನೇಕ, ಎಲ್ಲ ಇವುಗಳು ವಸ್ತುಗಳ ಸಂಖ್ಯೆಯನ್ನು ವಿಶೇಷಿಸದೆ ಅವುಗಳ ಪರಿಮಿತಿಯನ್ನು ಹೇಳುವದರಿಂದ ಪರಿಮಾಣವಾಚಕಗಳೆನ್ನಿಸಿ ಕೊಳ್ಳುತ್ತವೆ. ಉದಾ: ಅಷ್ಟು ಜನ ಕೂಡಿತು. ಎಷ್ಟು ಮಂದಿ ಬಂದರು? ಕೆಲವು ಹುಡುಗರು ಹೋದರು ಇತ್ಯಾದಿ.

## 4 ಸರ್ವನಾಮಕ ವಿಶೇಷಣ.

97. ನಿದರ್ಶಕ ಸರ್ವನಾಮಗಳಾದ ಅದು, ಇದು,ಎಂಬವುಗಳ ಸಂಕ್ಷೇಪ ರೂಪಗಳಾದ ಆ ಮತ್ತು ಈ, ಇಂಥವನು, ಅಂಥವನು ಎಂಬವುಗಳ ಸಂಕ್ಷೇಪ ರೂಪಗಳಾದ ಇಂಥ ಮತ್ತು ಅಂಥ, ಯಾವನು, ಎಂಥವನು ಎಂಬವುಗಳ ಸಂಕ್ಷೇಪ ರೂಪಗಳಾದ ಯಾವ ಮತ್ತು ಎಂಥ, ಇವುಗಳು ಸರ್ವನಾಮಕ ವಿಶೇಷಣಗಳೆನ್ನಿಸಿ ಕೊಳ್ಳುತ್ತವೆ. ಉದಾ: ಆ ಹುಡುಗನು, ಈ ಮನೆ, ಇಂಥ ಕುದುರೆ, ಅಂಥ ಪುಸ್ತಕ, ಯಾವ ಶಾಲೆ? ಎಂಥ ಕುದುರೆ? ಇತ್ಯಾದಿ.

## 5 ಕೃದ್ವಾಚಕ ವಿಶೇಷಣ.

98. ಹಿಂದೆ ಕ್ರಿಯಾಪದಗಳ ನಾಮಾತ್ಮಕ ರೂಪದಲ್ಲಿ ವಿವರಿಸಿದ ವರ್ತಮಾನ, ಭೂತ, ಭವಿಷ್ಯತ್, ನಿಷೇಧ ಕೃದ್ವಾಚೆಗಳು ವಸ್ತುಗಳು ಮಾಡುವಂಥ, ಪಡುವಂಥ, ಕ್ರಿಯೆಗಳನ್ನು ವಿಶೇಷಿಸುವ ಕಾರಣ ಅವುಗಳಿಗೆ ಕೃದ್ವಾಚಕ ವಿಶೇಷಣಗಳೆಂಬ ಹೆಸರು. ಉದಾ: ಹೋದ ವರುಷ, ಹಾರುವ ಪಕ್ಷಿ, ಕಲಿಯದ ಹುಡುಗ ಇತ್ಯಾದಿ.

99. ಮೇಲೆ ವಿವರಿಸಿದ 5 ವಿಧದ ವಿಶೇಷಣಗಳಲ್ಲದೆ ಸಂಸ್ಕೃತ ಮತ್ತು ಕನ್ನಡ ನಾಮಪದಗಳಿಗೂ ಗುಣವಾಚಕಗಳಿಗೂ ಆದ, ಉಳ್ಳ, ಎಂಬ, ಅಲ್ಲದ, ಇಲ್ಲದ ಮುಂತಾದ ಕೃದ್ವಾಚೆಗಳನ್ನು ಕೂಡಿಸುವದರಿಂದ ಕೃದ್ವಾಚೆ ಪ್ರಯುಕ್ತ ವಿಶೇಷಣಗಳಾಗುವವು. ಈ ಪ್ರಕಾರ ಕೂಡಿಸುವ ಕೃದ್ವಾಚೆಗಳಿಗೆ ಅಂಥ ಎಂಬ ಸರ್ವನಾಮಕ ವಿಶೇಷಣವನ್ನು ಕೆಲವು ಸರ್ತಿ ಸೇರಿಸುವದುಂಟು; ಮತ್ತು ಹಿಂದೆ ಸಮಾಸಗಳಲ್ಲಿ ವಿವರಿಸಿದ ಲುಕ್ಸಮಾಸ ಮತ್ತು ಅಲುಕ್ಸಮಾಸಗಳ ಪೂರ್ವ ಪದಗಳು ಪರಪದಗಳನ್ನು ವಿಶೇಷಿಸುವ ಕಾರಣ ಅವುಗಳನ್ನು ಸಂಬಂಧಾರ್ಥಕ ವಿಶೇಷಣಗಳನ್ನುತ್ತಾರೆ. ಉದಾ: ಕೃದ್ವಾಚೆ ಪ್ರಯುಕ್ತ ವಿಶೇಷಣಕ್ಕೆ—ಸೇವಕನಾದ ಹುಡುಗನು, ಬುದ್ಧಿಯುಳ್ಳ ಹುಡುಗಿ, ರಾಮನೆಂಬ ಸೇವಕನು, ಶ್ರೇಷ್ಟವಾದ ಮಾತು, ಜಾಗ್ರತೆಯಿಲ್ಲದ ಮನುಷ್ಯನು, ಹಿರಿದಾದಂಥ ವಸ್ತ್ರ ಇತ್ಯಾದಿ.

ಸಂಬಂಧಾರ್ಥಕ ವಿಶೇಷಣಕ್ಕೆ—ಬಾಳೆ ಗಿಡ, ಮರದ ಕೊಂಬೆ, ಆನೆ ಸುಂಡಿಲು, ಆನೆಯ ಸುಂಡಿಲು ಇತ್ಯಾದಿ.

100. ಮೇಲೆ ಕಾಣಿಸಿದ ಎಲ್ಲಾ ವಿಧದ ವಿಶೇಷಣಗಳಿಗೆ ಹಳೆಗನ್ನಡ ಪ್ರಕಾರ ಅನು, ಅಳು, ಅದು, ಅರು, ಅವು ಎಂಬ ಅಚ್ಪ್ರತ್ಯಯಗಳನ್ನಾಗಲಿ, ಹೊಸಗನ್ನಡ ಪ್ರಕಾರ ಅವನು, ಅವಳು, ಅದು, ಅವರು, ಅವುಗಳು ಎಂಬ ಪ್ರಥಮ ಪುರುಷಾರ್ಥಕ ಸರ್ವನಾಮಗಳನ್ನಾಗಲಿ, ಕೂಡಿಸುವದರಿಂದ ವಿಶೇಷಣಾರ್ಥಕ ನಾಮಗಳು ಆಗುವವು. ಉದಾ: ಕಿರಿಯನು, ಕಿರಿಯವನು, ಹಿರಿಯರು, ಹಿರಿಯವಳು, ಸತ್ತವನು, ಬಂದವನು, ಇಂಥವಳು, ಯಾವನು, ಯಾವಳು, ಯಾವದು, ಮೂಡಣವನು, ಮೂರ್ಖನಾದವನು, ಒಂದನೆಯವಳು ಇತ್ಯಾದಿ.

101. ಆದರೆ ಸಂಖ್ಯಾವಾಚಕಗಳಲ್ಲಿ ಒಂದು ಎಂಬದಕ್ಕೆ ಅನು ಪ್ರತ್ಯಯ ಸೇರುವಾಗಲೂ, ಎರಡರಿಂದ ಎಂಟರವರೆಗಿನ ಸಂಖ್ಯೆಗಳಿಗೂ, ಪರಿಮಾಣ ವಾಚಕಗಳಲ್ಲಿ ಅನಿತು, ಇನಿತು, ಎನಿತು ಎಂಬವುಗಳಿಗೂ ಅರು ಪ್ರತ್ಯಯ ಸೇರುವಾಗಲೂ, ವಿಕೃತಿ ಬಂದದೆ. ಹ್ಯಾಗಂದರೆ:—

(ಒಂದು=ಒರ್, ಎರಡು=ಇರ್) ಒರ್+ಅನು=ಒರ್ವನು (ಒಬ್ಬನು), ಇರ್+ಅರು=ಇರ್ವರು (ಇಬ್ಬರು), ಮೂರ್+ಅರು=ಮೂರ್ವರು (ಮೂವರು), ನಾಲ್ಕು+ಅರು=ನಾಲ್ವರು, ಐದು+ಅರು=ಐವರು, ಆರು+ಅರು=ಆರ್ವರು, ಏಳು+ಅರು=ಎಳ್ವರು, ಎಂಟು+ಅರು=ಎಣ್ಬರು (ಎಣ್ಬರು); ಅನಿತು+ಅರು=ಅನಿಬರು, ಇನಿತು+ಅರು=ಇನಿಬರು, ಎನಿತು+ಅರು=ಎನಿಬರು ಇತ್ಯಾದಿ.

102. ಒಂದು ಮತ್ತು ಒಬ್ಬ ಎಂಬ ಸಂಖ್ಯಾವಾಚಕಗಳನ್ನು ಅವವುಗಳ ಮೇಲೆಯಾಗಲಿ, ಬೇರೆ, ಮತ್ತು, ಇನ್ನು ಎಂಬ ಅವ್ಯಯಗಳ ಮೇಲಾಗಲಿ, ಯಾವನು, ಯಾವದು ಎಂಬ ಪ್ರಶ್ನಾರ್ಥಕ ಸರ್ವನಾಮಗಳ ಮೇಲಾಗಲಿ, ಕೂಡಿಸುವದರಿಂದ ವಿಶೇಷಣ ಪದಗಳಿಗೆ ಸಮಾನವಾದ ಸಂಖ್ಯಾವಾಚಕ ಸಾಮಾನ್ಯಾರ್ಥಕ ಸಮಾಸಪದಗಳು ಆಗುವವು. ಉದಾ: ಒಂದೊಂದು, ಒಬ್ಬೊಬ್ಬ, ಬೇರೊಬ್ಬ, ಮತ್ತೊಬ್ಬ, ಇನ್ನೊಬ್ಬ, ಇನ್ನೊಂದು, ಯಾವನೊಬ್ಬ, ಯಾವದೊಂದು ಇತ್ಯಾದಿ.

## V. ಅವ್ಯಯ ಶಬ್ದಗಳು.

103. ವಿಭಕ್ತಿಪ್ರತ್ಯಯವಾಗಲಿ, ಆಖ್ಯಾತಪ್ರತ್ಯಯವಾಗಲಿ, ಹೊಂದದ ಶಬ್ದಗಳಿಗೆ ಅವ್ಯಯ ಶಬ್ದಗಳೆಂಬ ಹೆಸರು.

104. ಅವ್ಯಯಗಳಲ್ಲಿ ಕ್ರಿಯಾವಿಶೇಷಣಾವ್ಯಯ, ಉಪಸರ್ಗಾವ್ಯಯ, ಸಮುಚ್ಚಾಯಕಾವ್ಯಯ, ಅನುಕರಣಾವ್ಯಯ, ಮತ್ತು ಭಾವಬೋಧಕಾವ್ಯಯ ಎಂಬ 5 ವಿಧವುಂಟು.

### 1. ಕ್ರಿಯಾವಿಶೇಷಣಾವ್ಯಯಗಳು.

105. ಕ್ರಿಯೆಯನ್ನು ವಿಶೇಷಿಸುವ ಅವ್ಯಯಶಬ್ದಗಳಿಗೆ ಕ್ರಿಯಾವಿ

ಶೇಷಣಾವ್ಯಯಗಳೆಂಬ ಹೆಸರು. ಅವುಗಳಲ್ಲಿ ಕ್ರಿಯೆಯು ನಡೆದ ಸ್ಥಳವನ್ನು ವಿಶೇಷಿಸುವ ಸ್ಥಾನವಾಚಕ ಕ್ರಿಯಾವಿಶೇಷಣಾವ್ಯಯಗಳೆಂತಲೂ, ಕಾಲವನ್ನು ವಿಶೇಷಿಸುವ ಕಾಲವಾಚಕ ಕ್ರಿಯಾವಿಶೇಷಣಾವ್ಯಯಗಳೆಂತಲೂ, ರೀತಿಯನ್ನು ವಿಶೇಷಿಸುವ ರೀತಿವಾಚಕ ಕ್ರಿಯಾವಿಶೇಷಣಾವ್ಯಯಗಳೆಂತಲೂ 3 ವಿಧ.

I. ಸ್ಥಾನ ವಾಚಕ ಕ್ರಿಯಾವಿಶೇಷಣಾವ್ಯಯಗಳು:—ಅಲ್ಲಿ, ಇಲ್ಲಿ, ಎಲ್ಲಿ, ಒಳಗೆ, ಹೊರಗೆ, ಕೆಳಗೆ, ಮೇಲೆ, ಹಿಂದೆ, ಮುಂದೆ, ಮುಂದು, ಹಿಂದು, ಸಮಕ್ಷ, ಸುತ್ತಮುತ್ತ, ಸುತ್ತಲು, ಅತ್ತ, ಅತ್ತಲು, ಅತ್ತಲಾಗಿ, ಇತ್ತ, ಇತ್ತಲು, ಇತ್ತಲಾಗಿ, ಎತ್ತ, ಎತ್ತಲು, ಎತ್ತಲಾಗಿ, ನಡುವೆ, ಆಚೆ, ಈಚೆ, ಎತ್ತಣಿಂದ, ಹಿಂದಣಿಂದ ಇತ್ಯಾದಿ.

II. ಕಾಲವಾಚಕ ಕ್ರಿಯಾವಿಶೇಷಣಾವ್ಯಯಗಳು:—ಈಗ, ಈಗಲು, ಆಗ, ಆಗಲು, ಆಗ್ಯೆ, ಆವಾಗ, ಯಾವಾಗ, ಯಾವಾಗಲು, ಇಂದು, ಅಂದು, ಎಂದು, ಇನ್ನು, ಇನ್ನುಮುಂದೆ, ನಿನ್ನೆ, ಈಹೊತ್ತು, ನಾಳೆ, ನಾಳಿದ್ದು (ನಾಡೆದು), ಮುಂಜಾನೆ, ಬೆಳಿಗ್ಯೆ, ಹೊತ್ತಾರೆ, ಸಂಜೆ, ಬೈಗು, ಮುಂದಾಗಿ, ಮುಂಚೆ, ಮುಂಚಿತಾಗಿ, ಮೊದಲು, ಮೊದಲಾಗಿ, ಆ ಮೇಲೆ, ಮೇಲೆ, ನಂತರ, ಅನಂತರ, ಕ್ಷಣದಲ್ಲಿ, ತಕ್ಷಣ, ತತ್ಕಾಲ, ಅನುದಿನ, ನಿತ್ಯ, ದಿನಾಲು, ಪ್ರತಿದಿನ, ನಿರಂತರ, ಸದಾ, ಸಾರ್ವದಾ, ಸದ್ಯ, ತರುವಾಯ, ಸಾಂಪ್ರತ ಇತ್ಯಾದಿ.

III. ರೀತಿವಾಚಕ ಕ್ರಿಯಾವಿಶೇಷಣಾವ್ಯಯಗಳು:—ಹಾಗೆ, ಹ್ಯಾಗೆ, ಹೀಗೆ, ಅಂತು, ಎಂತು, ಇಂತು, ಎಂತೆಂತು, ಇಂತಿಂತು, ಅಂತಕಿತು, ಬೇಗ, ಬೇಗನೆ, ಮೆಲ್ಲಗೆ, ಮೆಲ್ಲನೆ, ಸುಮ್ಮಗೆ, ಸುಮ್ಮನೆ, ಖಮ್ಮಗೆ, ಖಮ್ಮನೆ, ನೆಟ್ಟಗೆ, ನೆಟ್ಟನೆ, ಫಕ್ಕನೆ, ಜರ್ರನೆ, ಸರ್ರನೆ, ನುಣ್ಣಗೆ, ನುಣ್ಣನೆ, ಭಗ್ಗನೆ, ಗರ್ರನೆ, ತಣ್ಣಗೆ, ತಣ್ಣನೆ, ಕಪ್ಪಗೆ, ಕೆಂಪಗೆ, ಬೆಳ್ಳಗೆ ಇತ್ಯಾದಿ.

ಇದಲ್ಲದೆ ನಾಮಪದಗಳಿಗೂ ಗುಣವಾಚಕಗಳಿಗೂ ಆಗಿ ಎಂಬ ಪ್ರತ್ಯಯವನ್ನು ಕೂಡಿಸುವದರಿಂದ ರೀತಿವಾಚಕ ಕ್ರಿಯಾವಿಶೇಷಣಾವ್ಯಯಗಳಾಗುವವು. ಉದಾ: ಮರವಾಗಿ, ಕೆಂಪಾಗಿ, ಚಲುವಾಗಿ, ಕಲ್ಲಾಗಿ ಇತ್ಯಾದಿ.

106. ಸ್ಥಾನವಾಚಕ ಕ್ರಿಯಾವಿಶೇಷಣಾವ್ಯಯಗಳಿಗೆ ಅಣ ಎಂಬ

ಪ್ರತ್ಯಯವನ್ನು ಕೂಡಿಸುವದರಿಂದ ದಿಗ್ವಾಚಕ ವಿಶೇಷಣಗಳಾಗುತ್ತವೆ. ಅಣ ಪ್ರತ್ಯಯವು ಷಷ್ಠಿವಿಭಕ್ತಿ ಪ್ರತ್ಯಯವಾದ ಅ ಎಂಬದಕ್ಕೆ ಸಮಾನವಾಗಿರುವದರಿಂದ ಅಂಥ ಅವ್ಯಯಗಳಿಗೆ ಆ ಷಷ್ಠಿವಿಭಕ್ತಿ ಪ್ರತ್ಯಯ ಸೇರಿದರೆ ಕೂಡ ದಿಗ್ವಾಚಕ ವಿಶೇಷಣಗಳೆಂದು ತಿಳಿಯ ತಕ್ಕದ್ದು. ಉದಾ: ಅಲ್ಲಿಯಣ (ಅಲ್ಲಿಯ), ಎಲ್ಲಿಯಣ, (ಎಲ್ಲಯ), ಮೇಲಣ, (ಮೇಲಿನ).

107. ಇದಲ್ಲದೆ ಸ್ಥಾನವಾಚಕ ಮತ್ತು ಕಾಲವಾಚಕ ಕ್ರಿಯಾವಿಶೇಷಣಾವ್ಯಯಗಳಲ್ಲಿ ಕೆಲವಕ್ಕೆ ತೃತೀಯೆ, ಚತುರ್ಥಿ ವಿಭಕ್ತಿ ಪ್ರತ್ಯಯಗಳು ಸೇರುವದು ಉಂಟು, ಅಂಥ ಸಂಗತಿಯಲ್ಲಿ ಆ ಪ್ರತ್ಯಯಗಳು ಕೂಡಿದ್ದಾಗಿ ಎಣಿಸದೆ ಪ್ರತ್ಯಯದೊಂದಿಗೆ ಇರುವ ಇಡೀ ಶಬ್ದವು ಅವ್ಯಯವೆಂದು ತಿಳಿಯ ತಕ್ಕದ್ದು. ಉದಾ: ಅಲ್ಲಿಂದ ಬಂದನು, ಎಲ್ಲಿಗೆ ಹೋಗುತ್ತಾನೆ? ಈಚೆಯಿಂದ ನಡೆದನು, ಆಚೆಗೆ ಸೇರಿದನು; ಅಂದಿನಿಂದ ಬರೆಯುತ್ತಾನೆ, ಇಂದಿಗೆ ಮುಗಿಯಿತು ಇತ್ಯಾದಿ.

108. ಕಾಲವಾಚಕ ಕ್ರಿಯಾವಿಶೇಷಣಾವ್ಯಯಗಳಿಗೆ ಷಷ್ಠಿವಿಭಕ್ತಿ ಪ್ರತ್ಯಯ ಸೇರಿದರೆ ಅವುಗಳು ನಾಮಪದಗಳಿಗೆ ಸಮಾನವಾಗುವದರಿಂದ ಅಂಥ ಪಕ್ಷದಲ್ಲಿ ಅವುಗಳನ್ನು ಹಿಂದೆ 98 ನೇ ಅಂಕೆಯಲ್ಲಿ ವಿವರಿಸಿದ ಸಂಬಂಧಾರ್ಥಕ ವಿಶೇಷಣಗಳೆಂದು ತಿಳಿಯ ತಕ್ಕದ್ದು. ಉದಾ: ಇದು ನಿನ್ನೆಯ ಕೆಲಸ, ಬೈಗಿನ ಊಟ ಇತ್ಯಾದಿ.

## 2 ಉಪಸರ್ಗಾವ್ಯಯಗಳು.

109. ವಿಭಕ್ತ್ಯರ್ಥಗಳನ್ನು ವಿಶೇಷಿಸುವದಕ್ಕೆ ನಾಮಪದಗಳ ಮೇಲಿ ಬರುವ ಅವ್ಯಯ ಶಬ್ದಗಳಿಗೆ ಉಪಸರ್ಗಾವ್ಯಯಗಳೆಂಬ ಹೆಸರು. ಉಪಸರ್ಗಾವ್ಯಯಗಳನ್ನು ವಿಭಕ್ತ್ಯವ್ಯಯಗಳೆಂತಲೂ ಕೆಲವರು ಅನ್ನುವರು.

110. ಉಪಸರ್ಗಾವ್ಯಯಗಳಾಗಿ ಅಲ್ಲದೆ ಬೇರೆ ಪ್ರಯೋಗದಲ್ಲಿ ಉಪಯೋಗಿಸಲ್ಪಡದವುಗಳು ಶುದ್ಧ ಉಪಸರ್ಗಾವ್ಯಯಗಳೆಂತಲೂ, ಉಪಸರ್ಗಾವ್ಯಯಗಳಾಗಿ ಉಪಯೋಗಿಸಲ್ಪಡುವ ನಾಮಪದಗಳು ಅಥವಾ ನಾಮಪದಗಳಿಗೆ ಸಮಾನ ರೂಪಗಳು ಅರಿಉಪಸರ್ಗಾವ್ಯಯಗಳೆಂತಲೂ, 2 ವಿಧದ ಉಪಸರ್ಗಾವ್ಯಯಗಳಿರುತ್ತವೆ. ಅವು ಯಾವವೆಂದರೆ:—

I. ಶುದ್ಧ ಉಪಸರ್ಗಾವ್ಯಯಗಳು—ತನಕ, ಅಂತನಕ, ವರೆಗೆ, ಮಟ್ಟಿಗೆ, ಅನಕ, ಅಂತೆ, ಹಾಗೆ, ಒಲು, (ಓಲು) ಕೂಡೆ, ಒಂದಿಗೆ, ಒಡನೆ, ಒಡಗೂಡಿ, ಹೊರತು, ಕುರಿತು, ಓಸುಗ, ಓಸ್ಕರ, ಇಂತೆ, ಆಗಿ, ಸಲುವಾಗಿ ಇತ್ಯಾದಿ.

II. ಅರಿಉಪಸರ್ಗಾವ್ಯಯಗಳು—ಮುಂದೆ, ಹಿಂದೆ, ಹೊರಗೆ, ಒಳಗೆ, ಮೇಲೆ, ಕೆಳಗೆ, ಬಳಿಕ, ಸುತ್ತ, ನಿಮಿತ್ತ, ಕಾರಣ, ವಿಷಯ, ಉದ್ದಿಶ್ಯ, ಮೂಲ, ಪ್ರಕಾರ, ಮೆರಿಗೆ, ಪರಿಯಂತರ, ಪರಿ, ತರುವಾಯ, ಬಳಗೆ, ಬಳಿಯ, ಬಳಿಯಲ್ಲಿ, ಓಷಾದಿ, ಒಷಾಧಿಯಲ್ಲಿ, ಮುಖಾಂತರ, ಮುಖದಿಂದ, ದೆಸೆಯಿಂದ, ಕಾರಣದಿಂದ, ರೀತಿ, ರೀತಿಯಿಂದ, ರೀತಿಯಲ್ಲಿ, ಕಡೆಯಿಂದ, ಕಡೆಗೆ, ಕಡೆಯಲ್ಲಿ, ಹತ್ತಿಲಿ, ಬದೀಲಿ, ಬದಿಯಲ್ಲಿ, ಕೈಯಿಂದ ಇತ್ಯಾದಿ.

III. ಮೇಲೆ ಹೇಳಿದ ಉಪಸರ್ಗಾವ್ಯಯಗಳಲ್ಲಿ ಓಸುಗ, ಓಸ್ಕರ, ಇಂತೆ, ಆಗಿ ಎಂಬವುಗಳು ನಾಮಪದಗಳ ಚತುರ್ಥಿ ವಿಭಕ್ತಿಯ ಮೇಲೆ ಬರುವವು; ಬೇರೆ ಕೆಲವು ನಾಮಪದಗಳ ಪ್ರಕೃತಿ ರೂಪದ ಮೇಲೂ, ಷಷ್ಠಿ ವಿಭಕ್ತಿಯ ಮೇಲೂ, ಬರುವವು; ಇನ್ನೂ ಕೆಲವು ಕೃದ್ವಾಚಿಗಳ ಮೇಲೂ, ಕೆಲವು ಸರ್ವನಾಮಕ ವಿಶೇಷಣಗಳ ಮೇಲೂ, ಬರುವವು. ಓಸುಗ ಮತ್ತು ಓಸ್ಕರ ಎಂಬವುಗಳು ಎರಡನೇ ಭಾವರೂಪದ ಮೇಲೆ ಕೂಡ ಬರುವದುಂಟು. ಉದಾ: ಚತುರ್ಥಿ ವಿಭಕ್ತಿಯ ಮೇಲೆ—ಶಾಲೆಗೋಸುಗ, ಹುಡುಗನಿಗೋಸ್ಕರ, ಮರಕ್ಕಿಂತ, ಊಟಕ್ಕಾಗಿ ಇತ್ಯಾದಿ. ಪ್ರಕೃತಿಯ ಮೇಲೆ—ಮನೆವರೆಗೆ, ಹೊಳೆಪರಿಯಂತ, ಕೆರೆಬಳಿಯ ಇತ್ಯಾದಿ. ಷಷ್ಠಿ ವಿಭಕ್ತಿಯ ಮೇಲೆ—ಕೆಲಸದ ಉದ್ದಿಶ್ಯ, ನಾಯಿಯ ಹಾಗೆ, ಸೇವಕನ ಮುಖಾಂತರ ಇತ್ಯಾದಿ. ಕೃದ್ವಾಚಿಯ ಮೇಲೆ—ಮಾಡಿದಂತೆ, ಬಂದ ಮೇಲೆ, ಅದರ ತರುವಾಯ ಇತ್ಯಾದಿ. ಸರ್ವನಾಮಕ ವಿಶೇಷಣದ ಮೇಲೆ—ಈ ಮೆರಿಗೆ, ಆ ರೀತಿ, ಯಾವ ಪ್ರಕಾರ ಇತ್ಯಾದಿ. ಎರಡನೇ ಭಾವರೂಪದ ಮೇಲೆ—ಬರಲೋಸುಗ, ಮಾಡಲೋಸ್ಕರ ಇತ್ಯಾದಿ.

## 3. ಸಮುಚ್ಚಾಯಕಾವ್ಯಯಗಳು.

112. ಎರಡು ವಾಕ್ಯಗಳನ್ನಾಗಲಿ, ಎರಡು ಶಬ್ದಗಳನ್ನಾಗಲಿ, ಕೂಡಿ

ಸುವದಕ್ಕಾಗಿ ಉಪಯೋಗಿಸಲ್ಪಡುವ ಅವ್ಯಯಗಳು ಸಮುಚ್ಚಾಯಕಾವ್ಯಯಗಳಾಗಿರುತ್ತವೆ. ಉದಾ: ನಾನು ಅಲ್ಲಿಗೆ ಬರುತ್ತೇನೆ ಅಥವಾ ನೀನು ಇಲ್ಲಿಗೆ ಬಾ. ನಾನು ಮತ್ತು ಅವನು ಬರುತ್ತೇವೆ. ಈ ವಾಕ್ಯಗಳಲ್ಲಿ "ಅಥವಾ" ಎಂಬದು 2 ವಾಕ್ಯಗಳನ್ನು ಕೂಡಿಸುತ್ತದೆ; "ಮತ್ತು" ಎಂಬದು 2 ಶಬ್ದಗಳನ್ನು ಕೂಡಿಸುತ್ತದೆ. ಇವುಗಳಲ್ಲದೆ ಇದೇ ಪ್ರಕಾರ ಉಪಯೋಗಿಸಲ್ಪಡುವ ಬೇರೆ ಸಮುಚ್ಚಾಯಕಾವ್ಯಯಗಳು ಯಾವವೆಂದರೆ:—ಕೂಡ, ಸಹ, ಸುದ್ದಾ, ಪರಂತು, ಆಗಲಿ, ಇಲ್ಲವೆ, ಆದಾಗ್ಯೂ, ಆದರೂ, ಆದರೆ, ಹೊರತು, ಇದಲ್ಲದೆ, ಅಲ್ಲದೆ, ಅಂದರೆ, ಇನ್ನು, ಎಂಬ, ಎಂಬದು, ಎಂಬದಾಗಿ ಇತ್ಯಾದಿ. ಇದಲ್ಲದೆ ಸಮುಚ್ಚಾಯಕ ನಿಪಾತಗಳಾದ ಉ, ಊ, ಪ್ರಶ್ನಾರ್ಥಕ ನಿಪಾತಗಳಾದ ಆ, ಎ, ಓ, ಪ್ರಶ್ನಾವಿಶಂಕಾರ್ಥಕ ನಿಪಾತಗಳಾದ ಆ, ಎ, ಏ, ಅವಧಾರಣಾರ್ಥಕ ನಿಪಾತಗಳಾದ ಎ, ಏ, ಪಕ್ಷಾರ್ಥಕ ನಿಪಾತಗಳಾದ ರೆ, ರೂ= (ರೆ+ಊ), ಇವೆಲ್ಲಾ ಸಮುಚ್ಚಾಯಕಾವ್ಯಯಗಳಿಗೆ ಸಂಬಂಧಿಸುತ್ತವೆ. ಈ ನಿಪಾತಗಳನ್ನು ಪ್ರಯೋಗಿಸುವದು ಹ್ಯಾಗಂದರೆ:—

ಸಮುಚ್ಚಾಯಕ ನಿಪಾತಗಳಿಗೆ—ಮರವು ಗಿಡವು ಬಿದ್ದವು. ಮರವೂ ಗಿಡವೂ ಬಿದ್ದವು.

ಪ್ರಶ್ನಾರ್ಥಕ ನಿಪಾತಗಳಿಗೆ—ನೀನು ಬರುತ್ತೀಯಾ? ನೀನೆ ದಶರಥನೆಂಬ ನೃಪತಿಯ ಸೂಸು? ಅವನು ಬಂದನೋ?

ಪ್ರಶ್ನಾವಿಶಂಕಾರ್ಥಕ ನಿಪಾತಗಳಿಗೆ—ನೀನು ಜಯಿಸುವಿಯಾ? (ನೀನು ಜಯಿಸಲಾರೆ ಎಂಬ ಅರ್ಥ). ಉಂಟೆ ರಾಮನೊಳ್ ಕಪಟ? (ರಾಮನಲ್ಲಿ ಕಪಟ ಇಲ್ಲವೆಂಬ ಅರ್ಥ).

ಸರ್ವನಾಮಗಳಿಗೆ ಸಂಬೋಧನ ವಿಭಕ್ತಿ ಉಂಟೇ? (ಅವುಗಳಿಗೆ ಆ ವಿಭಕ್ತಿ ಇಲ್ಲವೆಂಬ ಅರ್ಥ).

ಅವಧಾರಣಾರ್ಥಕ ನಿಪಾತಗಳಿಗೆ—ನೀನೆ ಮಾಡಲು ಬೇಕು, ನೀನೇ ಮಾಡಬೇಕು. (ನೀನಲ್ಲದೆ ಬೇರೆಯವರು ಮಾಡ ಬಾರದು ಎಂಬ ಅರ್ಥ).

ಪಕ್ಷಾರ್ಥಕ ನಿಪಾತಗಳಿಗೆ—ಅವನು ಬಂದರೆ ಆದೀತು. (ಬಂದಪಕ್ಷದಲ್ಲಿ ಎಂಬ ಅರ್ಥ) ನೀನು ಬಂದರೂ ಆಗದು. (ಬಂದ ಪಕ್ಷದಲ್ಲಿಯೂ ಎಂಬ ಅರ್ಥ)

## 4. ಅನುಕರಣಾವ್ಯಯಗಳು.

113. ಘಂಟೆ, ತಾಳ, ಮೃದಂಗ, ಫಿರಂಗಿ, ತುಪಾಕಿ ಮೊದಲಾದವುಗಳ ಸಾದಗಳನ್ನು, ಪಶು, ಮೃಗ, ಪಕ್ಷಿ ಮುಂತಾದ ಪ್ರಾಣಿಗಳ ಕೂಗುಗಳನ್ನೂ, ಬೇರೆ ನಾನಾ ವಿಧದ ಧ್ವನಿಗಳನ್ನೂ ಅನು ರೂಪಿಸುವ ಪದಗಳು ಅನುಕರಣಾವ್ಯಯಗಳೆನ್ನಿಸಿ ಕೊಳ್ಳುವವು. ಉದಾ:—

ನಾದಗಳು—ಘಣಘಣನೆ, ಖಣಖಣನೆ, ಧಿಧ್ಧಿಧ್ಧಿಲಾಂಗ, ಗುಡುಮ್ಮನೆ, ಡುಮ್‌ಡುಮ್ಮನೆ ಇತ್ಯಾದಿ.

ಕೂಗುಗಳು—ಕೊಕ್ಕೊಕೋ, ಮ್ಯಾವ್‌ಮ್ಯಾವ್, ಘುಂಘುಂ, ಅಂಬಾ, ಅಂಬೇ, ಭೊಂಭೊಂ ಇತ್ಯಾದಿ.

ಬೇರೆ ಧ್ವನಿಗಳು—ಛಟಛಟ, ಘುಳುಘುಳು, ಫಳ್‌ಫಳ್, ಠಳಠಳ, ಬಿಮಿಬಿಮಿ ಇತ್ಯಾದಿ.

## ಭಾವಬೋಧಕಾವ್ಯಯಗಳು.

ಸಂತೋಷ, ವ್ಯಥೆ, ಅಸಹ್ಯತೆ, ಹೆದರಿಕೆ, ಒಲುಮೆ ಮುಂತಾದ ಮನೋಭಾವನೆಗಳನ್ನು ತೋರಿಸುವದಕ್ಕೆ ಉಪಯೋಗಿಸಲ್ಪಡುವ ಅವ್ಯಯ ಶಬ್ದಗಳಿಗೆ ಭಾವಬೋಧಕಾವ್ಯಯಗಳೆಂಬ ಹೆಸರು. ಉದಾ:

ಸಂತೋಷ—ಹಾಹಾ, ಹೋಹೋಹೋ, ಅಃ ಇತ್ಯಾದಿ.

ವ್ಯಥೆ—ಹಾಹಾ, ಅಕಟಾ, ಅಕಟಕಟಾ, ಅಯ್ಯೊ, ಅಯ್ಯಯ್ಯೋ, ಅಯ್ಯಮ್ಮಾ, ಅಯ್ಯಪ್ಪಾ ಇತ್ಯಾದಿ.

ಅಸಹ್ಯತೆ—ಇಸಿಸಿ, ಛೇ, ಛೀಛೀ, ಧುತ್, ಥೂ ಥೂ ಇತ್ಯಾದಿ.

ಹೆದರಿಕೆ—ಅಬಬಬ, ಅಪಪಪ, ಅತತತ, ಅಯ್ಯಮ್ಮ ಅಯ್ಯಪ್ಪ ಇತ್ಯಾದಿ.

ಒಲುಮೆ—ಶ್ಯಾಭಾಸ್, ಪೂತುರೇ, ಭಲಾ, ಭಲರೆ, ಮಝುರೇ, ಪೂತುಮಝುರೆ ಇತ್ಯಾದಿ.

ಇದಲ್ಲದೆ ಕರೆಯುವದರಲ್ಲಿ ಉಪಯೋಗಿಸುವ ಸಂಬುದ್ಧ್ಯಾವ್ಯಯಗಳು ಭಾವಬೋಧಕಾವ್ಯಯಗಳಿಗೆ ಸಂಬಂಧಿಸುತ್ತವೆ. ಉದಾ: ಓ, ಏ, ಎಲೇ, ಎಲಾ, ಯಾರೇ, ಯಾರಲ್ಲಿ? ಇತ್ಯಾದಿ.

# ವಾ ಕ್ಯ ರ ಚ ನೆ.

115. ಮನುಷ್ಯರ ಮನಸ್ಸಿನಲ್ಲಿ ಹುಟ್ಟ ಬಹುದಾದ ವಿಷಯವನ್ನು ತಿಳಿಸುವ ಹಾಗೆ ಕೂಡಿಸಲ್ಪಟ್ಟ ಶಬ್ದಗಳ ಕೂಟಕ್ಕೆ ವಾಕ್ಯವೆಂಬ ಹೆಸರು. ವಾಕ್ಯದಲ್ಲಿ ಕಾಣುವ ವಿಷಯಕ್ಕೆ ಮುಖ್ಯವಾದ ಪದವು ಆಖ್ಯೆ ಎನ್ನಿಸುವದು. ಆಖ್ಯೆಯು ಮಾಡುವಂಥ ಪಡುವಂಥ ಅಥವಾ ಇರುವಂಥ ಕ್ರಿಯೆಯನ್ನು ಹೇಳುವ ಪದಕ್ಕೆ ಆಖ್ಯಾತವೆಂಬ ಹೆಸರು. ಆಖ್ಯೆಗೆ ಕರ್ತೃಪದವೆಂತಲೂ, ಉದ್ದೇಶ್ಯ ಪದವೆಂತಲೂ ಅನ್ನುವದುಂಟು. ಆಖ್ಯಾತಪದವು ಪುರುಷ, ಲಿಂಗ ಮತ್ತು ವಚನಗಳಲ್ಲಿ ಆಖ್ಯೆಗೆ ವಿಧೇಯವಾಗುವ ಕಾರಣ ವಿಧೇಯ ಪದವೆಂದು ಕೂಡ ಅನ್ನಿಸಿ ಕೊಳ್ಳುತ್ತದೆ. ಉದಾ: ಹುಡುಗನು ಬರೆಯುತ್ತಾನೆ. ದೇವರು ಮಹೋನ್ನತನಾಗಿರುತ್ತಾನೆ. ಈ 2 ವಾಕ್ಯಗಳಲ್ಲಿ "ಹುಡುಗನು" "ದೇವರು" ಎಂಬ ಪದಗಳು ಆಖ್ಯೆಗಳಾಗಿರುತ್ತವೆ; "ಬರೆಯುತ್ತಾನೆ" "ಮಹೋನ್ನತನಾಗಿರುತ್ತಾನೆ" ಎಂಬವುಗಳು ಆಖ್ಯೆಗಳಿಗೆ ಪುರುಷ ಇತ್ಯಾದಿಗಳಲ್ಲಿ ವಿಧೇಯವಾಗುವ ಆಖ್ಯಾತಗಳಾಗಿರುತ್ತವೆ.

116. ಮಾಡುವಂಥ ಪಡುವಂಥ ಕ್ರಿಯೆಯನ್ನು ಆಖ್ಯೆಗೆ ಕೂಡಿಸುವದರಿಂದ ಆಗುವ ಆಖ್ಯಾತವು ಕ್ರಿಯಾವಾಚಕ ಆಖ್ಯಾತವೆಂದೂ, ವಿಶೇಷಣಾರ್ಥಕನಾಮ, ಕೃದ್ನಾಮ, ಕ್ರಿಯಾನಾಮ, ನಾಮಪದ, ಸರ್ವನಾಮ, ಇವುಗಳಲ್ಲಿ ಒಂದನ್ನು ಆಖ್ಯೆಗೆ ಕೂಡಿಸುವದರಿಂದ ಆಗುವ ಆಖ್ಯಾತವು ಲಕ್ಷಣವಾಚಕ ಆಖ್ಯಾತವೆಂದೂ, 2 ವಿಧದ ಆಖ್ಯಾತಗಳುಂಟು. ಉದಾ:

ಕ್ರಿಯಾವಾಚಕ ಆಖ್ಯಾತಕ್ಕೆ—ಪಕ್ಷಿಯು ಹಾರುತ್ತದೆ. ಕೋಳಿಯು ಕೂಗುತ್ತದೆ. ಹುಡುಗನು ಓದುತ್ತಾನೆ. ಹುಡುಗಿಯು ವ್ಯಥೆ ಪಡುತ್ತಾಳೆ ಇತ್ಯಾದಿ.

ಲಕ್ಷಣವಾಚಕ ಆಖ್ಯಾತಕ್ಕೆ—ಹುಡುಗನು ಒಳ್ಳೆಯವನಾಗಿರುತ್ತಾನೆ. (ಹುಡುಗನು ಒಳ್ಳೆಯವನು). ಅವನು ಮೂಢನವನಾಗಿರುತ್ತಾನೆ. (ಅವನು ಮೂಢನವನು). ಅವನು ಸಿಟ್ಟು ಬಂದವನಾಗಿರುತ್ತಾನೆ. (ಅವನು

ನಿನ್ನೆ ಬಂದವನು). ಈ ಹಣವು ಪೆಟ್ಟಿಗೆಯಿಂದ ತೆಗದದ್ದಾಗಿರುತ್ತದೆ (ಈ ಹಣವು ಪೆಟ್ಟಿಗೆಯಿಂದ ತೆಗದದ್ದು). ಅದು ಕೋಳಿಯಾಗಿರುತ್ತದೆ (ಅದು ಕೋಳಿಯು). ನಿನ್ನೆ ಬಂದವನು ಅವನಾಗಿರುತ್ತಾನೆ. (ನಿನ್ನೆ ಬಂದವನು ಅವನು) ಇತ್ಯಾದಿ.

117. ಮೇಲೆ ಲಕ್ಷಣವಾಚಕ ಆಖ್ಯಾತಕ್ಕೆ ಕೊಟ್ಟ ಉದಾಹರಣೆಗಳಲ್ಲಿ ತೋರುವ ಪ್ರಕಾರ "ಆಗಿರು" ಎಂಬ ಸಂಯುಕ್ತ ಕ್ರಿಯಾಪದದ ಸಹಾಯವಿಲ್ಲದೆ ಆಖ್ಯೆಗೆ ಕೂಡಿಸಲ್ಪಟ್ಟ ವಿಶೇಷಣಾರ್ಥಕನಾಮ ಇತ್ಯಾದಿಗಳು ಅಂಥ ಲುಪ್ತವಾದ "ಆಗಿರು" ಎಂಬದನ್ನು ಸಂಪೂರ್ಣ ಮಾಡುವ ಆಖ್ಯಾತ ಸಮಾಪಕಗಳಾದಾಗ್ಯೂ ಬೇರೆ ಆಖ್ಯಾತಗಳಂತೆಯೇ ಆಖ್ಯಾತಗಳಾಗಿ ನಿತ್ಯ ಪುರುಷ, ಲಿಂಗ ಮತ್ತು ವಚನಗಳಲ್ಲಿ ಆಖ್ಯೆಗೆ ವಿಧೇಯುವಾಗುವದರಿಂದ ವಿಧೇಯ ವಿಶೇಷಣಗಳೆನ್ನಿಸಿ ಕೊಳ್ಳುತ್ತವೆ.

118. ಆಖ್ಯಾತ ಪದವು ಹೇಳುವ ಕ್ರಿಯಾಪದವು ಸಕರ್ಮಕವಾಗಿದ್ದರೆ ಆ ಕ್ರಿಯೆಯನ್ನು ಸಂಪೂರ್ಣ ಮಾಡಲಿಕ್ಕೆ ಬೇರೊಂದು ಪದವು ಅಗತ್ಯವಾಗಿರುವದು; ಅಂಥ ಪದಕ್ಕೆ ಆಖ್ಯಾತಸಮಾಪಕ ಅಥವಾ ಕರ್ಮಪದವೆಂಬ ಹೆಸರು.

119. ಮೇಲೆ ವಿವರಿಸಿದ ಪ್ರಕಾರ ಒಂದು ವಾಕ್ಯದಲ್ಲಿ ಆಖ್ಯೆ, ಆಖ್ಯಾತ ಮತ್ತು ಆಖ್ಯಾತ ಸಮಾಪಕ ಈ ಮೂರು ಮುಖ್ಯ ಪದಗಳಾಗಿರುತ್ತವೆ. ಈ ಮುಖ್ಯ ಪದಗಳನ್ನು ವಿಶೇಷಿಸುವದಕ್ಕೆ ವಾಕ್ಯದಲ್ಲಿ ಬೇರೆ ಬೇರೆ ಪದಗಳು ಬರುವದರಿಂದ, ಆಖ್ಯೆಯನ್ನು ವಿಶೇಷಿಸುವ ಪದಗಳಿಗೆ ಆಖ್ಯಾ ವಿಶೇಷಣವೆಂದೂ, ಆಖ್ಯಾತವನ್ನು ವಿಶೇಷಿಸುವ ಪದಗಳಿಗೆ ಆಖ್ಯಾತ ವಿಶೇಷಣವೆಂದೂ, ಆಖ್ಯಾತಸಮಾಪಕವನ್ನು ವಿಶೇಷಿಸುವ ಪದಗಳಿಗೆ ಆಖ್ಯಾತ-ಸಮಾಪಕ ವಿಶೇಷಣವೆಂದೂ ಹೆಸರು.

120. ಮೇಲೆ ಹೇಳಿದ ಪ್ರಕಾರ ವಿಶೇಷಣಗಳಿಂದ ವಿಶೇಷಿಸಲ್ಪಡದ ಆಖ್ಯೆ, ಆಖ್ಯಾತ, ಆಖ್ಯಾತ ಸಮಾಪಕಗಳು ಸಾಮಾನ್ಯ ಆಖ್ಯೆ, ಸಾಮಾನ್ಯ ಆಖ್ಯಾತ, ಸಾಮಾನ್ಯ ಆಖ್ಯಾತ-ಸಮಾಪಕಗಳೆಂದೂ, ಹಾಗೆ ವಿಶೇಷಿಸಲ್ಪಟ್ಟವುಗಳು ವಿಶೇಷಿತ ಆಖ್ಯೆ, ವಿಶೇಷಿತ ಆಖ್ಯಾತ ವಿಶೇಷಿತ ಆಖ್ಯಾತಸಮಾಪಕಗಳೆಂದು ಕೂಡ ಅನ್ನಿಸಿ ಕೊಳ್ಳುತ್ತವೆ. ಉದಾ:

ಸಾಮಾನ್ಯ ಆಖ್ಯೆಗೆ—**ಹುಡುಗನು** ಓದುತ್ತಾನೆ. **ಕುದುರೆಯು** ಓಡುತ್ತದೆ.

ವಿಶೇಷಿತ ಆಖ್ಯೆಗೆ—**ಒಳ್ಳೆ ಹುಡುಗನು** ಓದುತ್ತಾನೆ. **ಕರಿ ಕುದುರೆ** ಓಡುತ್ತದೆ.

ಸಾಮಾನ್ಯ ಆಖ್ಯಾತಕ್ಕೆ—ಹುಡುಗಿಯು **ಕಲಿಯುತ್ತಾಳೆ.** ಪಕ್ಷಿಯು **ಹಾರುತ್ತದೆ.**

ವಿಶೇಷಿತ ಆಖ್ಯಾತಕ್ಕೆ—ಹುಡುಗಿಯು **ಚೆನ್ನಾಗಿ ಕಲಿಯುತ್ತಾಳೆ.** ಪಕ್ಷಿಯು **ಬೇಗ ಬೇಗ ಹಾರುತ್ತದೆ.**

ಸಾಮಾನ್ಯ ಆಖ್ಯಾತ-ಸಮಾಪಕಕ್ಕೆ—ಬೋಧಕನು **ಹುಡುಗನನ್ನು** ಹೊಡೆಯುತ್ತಾನೆ.

ವಿಶೇಷಿತ ಆಖ್ಯಾತ-ಸಮಾಪಕಕ್ಕೆ—ಬೋಧಕನು **ದಡ್ಡ ಹುಡುಗನನ್ನು** ಹೊಡೆಯುತ್ತಾನೆ.

121. ಒಂದು ವಾಕ್ಯದಲ್ಲಿ ಮೇಲೆ ಹೇಳಿದ ಮುಖ್ಯ ಪದಗಳನ್ನು ಬರೇಯಾಗಿ ಪ್ರಯೋಗಿಸಿದರೆ ನಗ್ನ ವಾಕ್ಯವೆಂತಲೂ, ವಿಶೇಷಣ ಸಹಿತವಾಗಿ ಪ್ರಯೋಗಿಸಿದರೆ ವೃದ್ಧಿತ ವಾಕ್ಯವೆಂತಲೂ ಹೆಸರು. ಉದಾ:

ನಗ್ನವಾಕ್ಯಕ್ಕೆ—ಮನುಷ್ಯರು ಮರ್ತ್ಯರು, ದೇವರು ಅವರನ್ನು ಸೃಷ್ಟಿಸಿದನು.

ವೃದ್ಧಿತವಾಕ್ಯಕ್ಕೆ—ಎಲ್ಲಾ ಮನುಷ್ಯರು ಸದಾಮರ್ತ್ಯರು. ಸರ್ವತ್ರಾಣಿಯಾದ ದೇವರು ಮರ್ತ್ಯರಾದ ಮನುಷ್ಯರನ್ನು ಲೋಕದಲ್ಲಿ ಸೃಷ್ಟಿಸಿದನು.

122. ಒಂದು ವಾಕ್ಯದಲ್ಲಿಯು ಮುಖ್ಯ ಪದಗಳ ಸ್ಥಳದಲ್ಲಿಯೂ ಅವುಗಳನ್ನು ವಿಶೇಷಿಸುವ ವಿಶೇಷಣಗಳ ಸ್ಥಳದಲ್ಲಿಯೂ ಪದಗಳ ಸಮುದಾಯವನ್ನು ಪ್ರಯೋಗಿಸುವದು ಉಂಟು; ಅಂಥ ಪದಗಳ ಸಮುದಾಯದ ಅಂತದಲ್ಲಿ ಒಂದು ಕ್ರಿಯಾಪದದ ರೂಪವು ಅಗತ್ಯ; ಆ ಕ್ರಿಯಾಪದರೂಪವು ಅಪೂರ್ಣವಾಗಿದ್ದರೆ ಅಂಥ ಸಮುದಾಯಕ್ಕೆ ಅಪೂರ್ಣ ಉಪವಾಕ್ಯ ಅಥ

ವಾ ವಾಕ್ಯಾಂಗವೆಂತಲೂ, ಪೂರ್ಣ ಅಥವಾ ಪುರುಷಾತ್ಮಕವಾಗಿದ್ದರೆ ಪೂರ್ಣ ಉಪವಾಕ್ಯವೆಂತಲೂ, ಹೆಸರು. ಉದಾ:

ಅಪೂರ್ಣಉಪವಾಕ್ಯಕ್ಕೆ—**ರಾವಣನನ್ನು ಕೊಂದವನು** ಸೀತಾರಾಮನು. ಇವನು **ಕೋಸಲ ದೇಶವನ್ನು** ಆಳಿದ ಅರಸರಲ್ಲಿ ಶ್ರೇಷ್ಠನು. ಆದದರಿಂದ ಈತನು **ಸರ್ವೇ ಜನರಿಂದ ಹೊಗಳಿಸಿಕೊಳ್ಳಲಿಕ್ಕೆ** ಯೋಗ್ಯನು.

ಪೂರ್ಣ ಉಪವಾಕ್ಯಕ್ಕೆ— **ಯಾವನು ಮೋಸ ಮಾಡುವನೋ** ಅವನು ದೋಷ ಪಡುವನು. **ಒಳ್ಳೆ ಹುಡುಗನು ಕಲಿಯುತ್ತಾನೆಂಬ** ದು ಸತ್ಯವೇ.

123. ಉಪವಾಕ್ಯವೆಂದರೆ—ತನ್ನಲ್ಲಿ ಸಂಪೂರ್ಣ ಆಲೋಚನೆಯನ್ನು ಹೇಳದೆ ಇನ್ನೊಂದು ವಾಕ್ಯಕ್ಕೆ ಒಳಗಾದ ವಾಕ್ಯವು. ಉದಾ: **ಅಪಾಯಗಳು ಬಂದಾಗ** ತಪ್ಪಿಸಿಕೊಳ್ಳಬೇಕು. ಈ ವಾಕ್ಯದಲ್ಲಿ 'ಅಪಾಯಗಳು ಬಂದಾಗ' ಎಂಬ ವಾಕ್ಯವು ಸಂಪೂರ್ಣ ಆಲೋಚನೆಯನ್ನು ಕೊಡುವದಿಲ್ಲ. "ತಪ್ಪಿಸಿಕೊಳ್ಳಬೇಕು" ಎಂಬ ವಾಕ್ಯಕ್ಕೆ ಅಧೀನವಾಗಿದೆ. ಆದದರಿಂದ ಮೊದಲಿನ ವಾಕ್ಯಕ್ಕೆ ಉಪವಾಕ್ಯವೆಂಬ ಹೆಸರು. ಇದಕ್ಕೆ ಅಧೀನವಾಕ್ಯವೆಂತಲೂ ಹೇಳುತ್ತಾರೆ. ಅಧೀನವಾಕ್ಯವು ಯಾವ ವಾಕ್ಯಕ್ಕೆ ಒಳಗಾಗಿಯದೋ ಅದಕ್ಕೆ ಪ್ರಧಾನ ವಾಕ್ಯವನ್ನುವರು.

124. ಅಪೂರ್ಣವಾಕ್ಯದಲ್ಲಿ ತೋರುವ ಕ್ರಿಯಾಪದವು ಭಾವರೂಪವಾಗಿದ್ದರೆ ಭಾವರೂಪಾತ್ಮಕ ವಾಕ್ಯವೆಂತಲೂ, ನ್ಯೂನರೂಪವಾಗಿದ್ದರೆ ನ್ಯೂನರೂಪಾತ್ಮಕ ವಾಕ್ಯವೆಂತಲೂ, ಕೃದ್ವಾಚಿಯಾಗಿದ್ದರೆ ಕೃದ್ವಾಚಕ ವಾಕ್ಯವೆಂತಲೂ, ಕೃದ್ನಾಮವಾಗಿದ್ದರೆ ಕೃದ್ನಾಮಕ ವಾಕ್ಯವೆಂತಲೂ, ಕ್ರಿಯಾನಾಮವಾಗಿದ್ದರೆ ಕ್ರಿಯಾನಾಮಕ ವಾಕ್ಯವೆಂತಲೂ, ಹೆಸರು. ಇನ್ನೂ ಈ ವಾಕ್ಯಗಳು ಆಖ್ಯೆ ಆಖ್ಯಾತ-ಸಮಾಪಕಗಳ ಸ್ಥಳದಲ್ಲಿ ಬಂದರೆ ನಾಮವಾಕ್ಯಾಂಗವೆಂದೂ, ಆಖ್ಯಾವಿಶೇಷಣ ಆಖ್ಯಾತ-ಸಮಾಪಕಗಳ ಸ್ಥಳದಲ್ಲಿ ಬಂದ

ರೆ ಗುಣವಾಕ್ಯಾಂಗವೆಂದೂ, ಆಖ್ಯಾತ ವಿಶೇಷಣದ ಸ್ಥಳದಲ್ಲಿ ಬಂದರೆ ಕ್ರಿಯಾ ವಿಶೇಷಣ ವಾಕ್ಯಾಂಗವೆಂದು ಸಹ ಅನ್ನಿಸಿಕೊಳ್ಳುವದು.

ಭಾವರೂಪಾತ್ಮಕ ವಾಕ್ಯಕ್ಕೆ—ಉತ್ತಮ ಅರಸನು ಪ್ರಜೆಗಳನ್ನು ಪೀಡಿಸಲು, ಘನತೆಗೆ ಕುಂದು ಬರುವದು. ಬೆಳಗಾಗಲು ಘಂಟೆಯಾಯ್ತು. ದೇವರನ್ನು ಮನಃಪೂರ್ವಕವಾಗಿ ಪ್ರಾರ್ಥಿಸಲಿಕ್ಕೆ ಧೈರ್ಯ ಹೊಂದುವಿ.

ನ್ಯೂನರೂಪಾತ್ಮಕ ವಾಕ್ಯಕ್ಕೆ—ಹೊತ್ತು ಮೂಡುತ್ತಲೇ ಬೆಳಗಾಯಿತು. ಆಟಕ್ಕೆ ನಿಂತು, ಪಾಠ ಕೆಟ್ಟಿತು. ಮಳೆ ಗರಿಯದೆ, ಬೆಳೆ ಉರಿಯಿತು.

ಕೃದ್ವಾಚಕ ವಾಕ್ಯಕ್ಕೆ—ರೊಟ್ಟಿಗೆ ಬಂದ ನಾಯಿ ತುಪ್ಪಕ್ಕೆ ಬಂದೀತೇ? ಆನೆ ಹೂಸಿದ ಹಾಗೆ ದುಶ್ಶಬ್ದ ಮಾತ್ರವೇ. ಕೋಣ ಬೆಳದರೆ ಆನೆಯಾದೀತೇ?

ಕೃದ್ನಾಮ ವಾಕ್ಯಕ್ಕೆ—ಮೊನ್ನೆ ಹುಟ್ಟಿದವರಾದ ಮೇಲೆ ನಾಳೆ ಸಾಯುವವರೇ. ಪಾಪ ಮಾಡಿದವನಿಗೆ ದೋಷ ತಟ್ಟುವದು. ತಾಳಿದವ ಬಾಳ್ಯಾನು.

ಕ್ರಿಯಾನಾಮ ವಾಕ್ಯಕ್ಕೆ—ಕರ್ಮದಿಂದ ದೊರಕಿದ್ದನ್ನು ಎಲ್ಲರೂ ಅನುಭವಿಸುತ್ತಾರೆ. ವಿಚಾರಣೆ ಮಾಡೋಣದರಿಂದ ಬುದ್ಧಿ ಬರುತ್ತದೆ.

ನಾಮವಾಕ್ಯಾಂಗಕ್ಕೆ—ನಿನಗೆ ಬೇಕಾದ್ದು ಇದೇ. ಅದು ನನಗೆ ಬೇಕಾದ್ದು. ಗಿಡವಾಗಿ ಬೊಗ್ಗಿಸ ಕೂಡದ್ದನ್ನು ಮರವಾದಾಗ ಬೊಗ್ಗಿಸ ಕೂಡಿತೇ?

ಗುಣವಾಕ್ಯಾಂಗಕ್ಕೆ—ತಂದೆಗೆ ಬಳ್ಳಿಯುವನೆಂತ ಹೇಳಿಸಿದ ಅಂಬಿಗನ ಮಗನು. ತನಗೆ ಬೇಕಾದ ವಸ್ತು ಸರ್ವಲೋಕಕ್ಕೂ ಬೇಕು. ಗಾಳಿಗೆ ಬೈದ್ದ ಅನ್ನ ಹಿಂದಕ್ಕೆ ಬಾರದು.

ಕ್ರಿಯಾವಿಶೇಷಣವಾಕ್ಯಾಂಗಕ್ಕೆ ಗೋಳ ಬೇರು ದಾಟಿದ ಮೇಲೆ

ಗೋಪಾಳರಾಯ. **ಗೋಡೆ ಬಿದ್ದರೆ** ಜಗಲೀ ಮೇಲೆ. **ಗತಿ ಇಲ್ಲದವನಿಗೆ** ಮತಿ ಇಲ್ಲ.

(ಇಲ್ಲಿ ತಿಳಿಯ ತಕ್ಕದ್ದೇನಂದರೆ:—ಅಪೂರ್ಣ ಉಪವಾಕ್ಯಗಳ ಅಪೂರ್ಣ ಕ್ರಿಯಾಪದವು, ಒಂದು ವಾಕ್ಯಾಂಗದ ಅರ್ಥ ಕೊಟ್ಟರೂ, ಅದರ ಕಾರಕಾರ್ಥ ಕೊಡುವ ಕರ್ತೃಪದ ಇತ್ಯಾದಿ ಪದಗಳನ್ನು ಕೂಡಿದ್ದರೆ ಮಾತ್ರ ವಾಕ್ಯಾಂಗವಾಗಿ ಗ್ರಹಿಸಲ್ಪಡುವದು. ಮತ್ತು ಅಪೂರ್ಣ ಕ್ರಿಯೆಗೂ ಆಖ್ಯಾತಕ್ಕೂ ಭಿನ್ನಕರ್ತೃವಿದ್ದಲ್ಲಿ ಆ ಉಪವಾಕ್ಯವನ್ನು ಮಾತ್ರ ಮುಂದೆ ವಾಕ್ಯ ವಿಭಜನೆಯಲ್ಲಿ ವಿವರಿಸಲಾದೀತು).

125. ಪೂರ್ಣ ಉಪವಾಕ್ಯಗಳಲ್ಲಿ ಸಂಬಂಧಿತವೇತಲೂ, ಸೂಚಿತವೆಂತಲೂ ಎರಡು ವಿಧ ಉಪವಾಕ್ಯಗಳವೆ. ಹ್ಯಾಗಂದರೆ:—

1. ಉಪವಾಕ್ಯದಲ್ಲಿ ಒಂದು ಪ್ರಶ್ನಾರ್ಥಕ ಶಬ್ದವೂ, ಪ್ರಧಾನ ವಾಕ್ಯದಲ್ಲಿ ಅದಕ್ಕೆ ಪ್ರತ್ಯುತ್ತರವಾಗಿ ಒಂದು ನಿದರ್ಶಕ ಶಬ್ದವೂ ಬಂದರೆ ಆ ಉಪವಾಕ್ಯಕ್ಕೆ ಸಂಬಂಧಿತ ಉಪವಾಕ್ಯವೆಂತೆ ಹೆಸರು. (ಇಲ್ಲಿ ಆ ಪ್ರಶ್ನಾರ್ಥಕ ಶಬ್ದವೂ ನಿದರ್ಶಕ ಶಬ್ದವೂ ಪ್ರಧಾನ ವಾಕ್ಯದ ಅರ್ಥಕ್ಕೆ ಉಪವಾಕ್ಯದ ಅರ್ಥವನ್ನು ಸಂಬಂಧಿಸುವ ಶಬ್ದಗಳಾದದರಿಂದ ಈ 2 ಶಬ್ದಗಳೂ ಉಪವಾಕ್ಯದಲ್ಲಿರುವಂತೆ ತಿಳಿಯ ಬೇಕು. ಉಪವಾಕ್ಯದ ಕ್ರಿಯಾಪದಕ್ಕೆ ಪ್ರಶ್ನಾವಿಶಂಕಾರ್ಥಕ ಓ ನಿಪಾತವು ಹತ್ತುವದು. ಒಂದೊಂದು ವೇಳೆ ಆ ಪ್ರಶ್ನಾರ್ಥಕ ಶಬ್ದವಾಗಲಿ, ನಿದರ್ಶಕ ಶಬ್ದವಾಗಲಿ, ಇಲ್ಲವೆ ಈ ಎರಡು ಕೂಡ ಲೋಪವಾಗುವದು ಉಂಟು). ಉದಾ:

ಸಂಬಂಧಿತವಾಕ್ಯಕ್ಕೆ—**ಯಾವನು ನೆಗಾಡುವನೋ** ಅವನು ಆಳುವನು. **ತನಗೆ ಹ್ಯಾಗೆ ಆಗ ಬೇಕೋ ಹಾಗೆ** ಅವರಿಗೆ ಮಾಡಬಾರದೇ? **ಎಂಥವನು ಮೂರ್ಖನೋ ಆಂಥವನು** ಮೂಢನು.

ಪ್ರಶ್ನಾರ್ಥಕ ಲೋಪವಾದ್ದಕ್ಕೆ—.... **ಬರಿಯ ಬಲ್ಲನೋ ಅಂಥವನು** ಓದಬಲ್ಲನು. (ಇಲ್ಲಿ **ಎಂಥವನು** ಲೋಪವಾಗಿದೆ).

ನಿರ್ದೇಶಕ ಲೋಪವಾದ್ದಕ್ಕೆ—ಏನು ತಿಳಿಯುವದೋ...ಬರಿಯುತ್ತಾನೆ. (ಇಲ್ಲಿ ಅದನ್ನು ಲೋಪ).

ಎರಡು ಶಬ್ದಗಳೂ ಲೋಪವಾದ್ದಕ್ಕೆ—ಅವನು...ಚನ್ನಾಗಿ ಕೇಳುವನೋ...ಚನ್ನಾಗಿ ಹೇಳುವನು. (ಇಲ್ಲಿ ಯಾವನನ್ನು ಮತ್ತು ಅದನ್ನು ಲೋಪ.)

2. ಉಪವಾಕ್ಯವು ಎಂದು, ಎಂತ, ಎಂಬ, ಎಂಬದು, ಮುಂತಾದ ಎನ್ನು, ಅನ್ನು ಧಾತುಗಳ ಅಪೂರ್ಣರೂಪಗಳ ಮೂಲಕವಾಗಿ ಪ್ರಧಾನ ವಾಕ್ಯಕ್ಕೆ ಸೇರಿದರೆ ಅಂಥ ಉಪವಾಕ್ಯಕ್ಕೆ ಸೂಚಿತ ಉಪವಾಕ್ಯವೆಂಬ ಹೆಸರು. ಉದಾ: ನೀನು ಬರತಕ್ಕದ್ದೇಕೆಂದು ನನ್ನ ಬಯಕೆಯು. ಬೀಜಗಳು ಹಾಗೆ ಫಲಸಿಕ್ಕುವದು ಎಂಬದಕ್ಕೆ ಸಂದೇಹವಿಲ್ಲ. ದೇವರು ಒಬ್ಬನೇ ಎಂಬ ಮಾತು ಸತ್ಯವೇ.

124. ಈ ಮೇಲೆ ಹೇಳಿದ ಎರಡು ವಿಧದ ಪೂರ್ಣ ಉಪವಾಕ್ಯಗಳು ಆಖ್ಯೆ, ಆಖ್ಯಾತ ಸಮಾಪಕಗಳ ಸ್ಥಳದಲ್ಲಿ ಬಂದು, ನಾಮಾತ್ಮಕ ವಾಕ್ಯವೆಂತಲೂ, ಅವುಗಳ ವಿಶೇಷಣಗಳಾದ ಆಖ್ಯಾವಿಶೇಷಣ, ಆಖ್ಯಾತಸಮಾಪಕವಿಶೇಷಣಗಳ ಸ್ಥಳದಲ್ಲಿ ಬಂದು, ಗುಣಾತ್ಮಕ ವಾಕ್ಯವೆಂತಲೂ, ಆಖ್ಯಾತ ವಿಶೇಷಣಗಳ ಸ್ಥಳದಲ್ಲಿ ಬಂದು, ಕ್ರಿಯಾವಿಶೇಷಣಾತ್ಮಕ ವಾಕ್ಯವೆಂತಲೂ, ಅನ್ನಿಸಿಕೊಳ್ಳುವವು. ಉದಾ: ನಾಮಾತ್ಮಕ ವಾಕ್ಯಕ್ಕೆ—ಯಾವದನ್ನು ಅಪೇಕ್ಷಿಸಿದಿಯೋ, ಅದು ಸಿಕ್ಕಿತು. ನಿರೂಪವಿದ್ದರೆ ಸ್ವರೂಪವೆಂಬದು ಕಾಣುತ್ತದಲ್ಲವೇ? ನನ್ನ ಅಪೇಕ್ಷೆಯು ನೀನು ಇಂತಿರ ಬಾರದೆಂದು.

ಗುಣಾತ್ಮಕ ವಾಕ್ಯಕ್ಕೆ-ಎಂಥವನು ಪಾಪ ಮಾಡನೋ ಅಂಥ ಮನುಷ್ಯನು ಪಾಪರಹಿತನು. ಕವಿ ಕಂಡಷ್ಟು ರವಿ ಕಾಣಲಿಲ್ಲ ಎಂಬದು ನಿಜವಾಯಿತು.

ಕ್ರಿಯಾವಿಶೇಷಣಾತ್ಮಕ ವಾಕ್ಯಕ್ಕೆ—ನಿನಗೆ ಪರರು ಹ್ಯಾಗೆ ಮಾಡಬೇಕೋ ಹಾಗೆ ನೀನು ಪರರಿಗೆ ಮಾಡ ಬೇಕು. ಸೂಕ್ಷ್ಮವಿಚಾರ ತಿಳಿಯ ಬೇಕೆಂಬದಾಗಿ ನಾನು ಪ್ರಯತ್ನಿಸುವದು.

125. ಒಂದು ವಾಕ್ಯದಲ್ಲಿ ಮುಖ್ಯ ಪದಗಳಾದ ಆಖ್ಯೆ, ಆಖ್ಯಾತ-ಸಮಾಪಕ, ಆಖ್ಯಾತ, ಮತ್ತು ಇವುಗಳ ವಿಶೇಷಣಗಳಾದ ಆಖ್ಯಾ ವಿಶೇಷಣ, ಆಖ್ಯಾತ-ಸಮಾಪಕ ವಿಶೇಷಣ, ಆಖ್ಯಾತ-ವಿಶೇಷಣಗಳು, ಕೂಡ ಏನೇನಾಗ ಬಹುದೆಂದರೆ:—

## I. ಆಖ್ಯೆ.

1. ನಾಮಪದ—ರಾಮನು ಓದುತ್ತಾನೆ. 2. ಸರ್ವನಾಮ—ಅವನು ಬರೆಯುತ್ತಾನೆ. 3. ವಿಶೇಷಣಾರ್ಥಕ ನಾಮ—ಹಿರಿಯರು ಬಂದರು. 4. ಕೃದ್ನಾಮ—ಬರೆಯುವವನು ಓದಲಿ. 5. ಕ್ರಿಯಾನಾಮ—ಹೋದದ್ದು ಬಾರದು. 6. ನಾಮಪದಕ್ಕೆ ಸಮಾನವಾದ ಶಬ್ದ—ಮೇಲೆ ಅವ್ಯಯವಾಗಿರುತ್ತದೆ. 7. ಭಾವರೂಪ— ಸುಳ್ಳು ಹೇಳಲು ಆಗದು. 8. ಭಾವ ರೂಪಾತ್ಮಕ ವಾಕ್ಯಾಂಗ—ಜನರು ಸುಳ್ಳು ಹೇಳಲು ಆಗದು. 9. ಕೃದ್ನಾಮಕ ವಾಕ್ಯಾಂಗ—ಪರರನ್ನು ದೂರುವವನು ತನ್ನನ್ನು ಮರೆಯುತ್ತಾನೆ. 10. ಕ್ರಿಯಾನಾಮಕ ವಾಕ್ಯಾಂಗ—ನೀನು ಮಾಡಿದ್ದು ಸರಿಯಲ್ಲ. 11. ಸಂಬಂಧಿತ ಉಪವಾಕ್ಯ—ಯಾವನು ಕಷ್ಟ ಪಡುತ್ತಾನೋ ಅವನು ತುಷ್ಟಿ ಪಡುವನು. 12. ಸೂಚಿತ ಉಪವಾಕ್ಯ—ದೇವರು ಸರ್ವತ್ರಾಣಿಯೆಂಬದು ನಿಜ.

## II. ಆಖ್ಯಾತ-ಸಮಾಪಕ ಅಥವಾ ಕರ್ಮಪದ.

126. ಮೇಲೆ ಆಖ್ಯೆಗೆ ಬಂದ 1 ನೇಯಿಂದ 12 ನೇ ವರೇಗಿನ ವಿಷಯಗಳು ಆಖ್ಯಾತ-ಸಮಾಪಕಕ್ಕೂ ಬರುವವು ಉದಾ:

1. ರಾಮನು ರಾವಣನನ್ನು ಕೊಂದನು. 2. ಅವನನ್ನು ಹನುಮಂತನು ಸೇವಿಸಿದನು. 3. ಚಿಕ್ಕವರನ್ನು ಕರೆ. 4. ಬೇಡುವವನನ್ನು ನೋಡಿದೆಯಾ? 5. ಹೇಳಿದ್ದನ್ನು ಕೇಳು. 6. ಕೆಯನ್ನು ಬರೆ. 7. ಮೂರ್ಖನು ಯೋಚಿಸಲು ತಿಳಿಯನು. 8. ಅಂಕೆ ಬರಿಯಲಿಕ್ಕೆ ಅರಿಯನು. 9. ಪುಸ್ತಕ ಓದಿದವನನ್ನು ಕೇಳಿದನು. 10. ನಾನು ಬರೆದ್ದನ್ನು ನೋಡುತ್ತಾನೆ. 11. ಯಾವನು ನಡಿಯುತ್ತಾನೋ ಅವನ

ನ್ನು ನೋಡುತ್ತಾನೆ. 11. ಯಾವನು ನಡಿಯುತ್ತಾನೋ ಅವನನ್ನು ನೋಡು. 12. ದೇವರು ಸರ್ವ ರಕ್ಷಕನೆಂಬದನ್ನು ಅರಿಯೆಯೋ?

127. ಲಕ್ಷಣವಾಚಕ ಆಖ್ಯಾತ-ಸಮಾಪಕಕ್ಕೆ ಆಖ್ಯೆಯಾಗ ಬಹುದಾದ್ದೆಲ್ಲಾ ಬರುವದು. ಉದಾ:

1. ನೀನು ಮನುಷ್ಯನು. 2. ಬರೆದವನು ಅವನು. 3. ರಾಮನು ಶ್ರೇಷ್ಟನು. 4. ಅವನೇ ಕೇಳದವನು. 5. ನನಗೆ ಬೇಕಾದ್ದು ತಿಳಿಯೋಣವು. 6. ಆ ಅಕ್ಷರವು ಓ. 7. ಹೋಗಲಿಕ್ಕೆ (ಉಂಟು). 8. ಅವನು ಸಾಯಲಿಕ್ಕೆ (ಇದ್ದಾನೆ). 9. ಓಡಿದ್ದು ಆಡಿದವನು. 10. ಏನು ನಿನಗೆ ಬಂದದ್ದು? 11. ಯಾರು ನಿನ್ನಲ್ಲಿ ಬಂದವನೋ ಅವನೇ. 12. ನಾನು ಹೇಳದ್ದು ಇನ್ನು ಹಾಗೆ ಮಾಡ ಬಾರದೆಂಬದು.

## III. ಆಖ್ಯಾತ.

1. ಧಾತುವಿನ ಪುರುಷಾತ್ಮಕರೂಪ.—ರಾಮನು ಓದುತ್ತಾನೆ. 2. ಯಾವದೊಂದು ಊನ ಕ್ರಿಯಾಪದ.—ನನಗೆ ಪುಸ್ತಕ ಬೇಕು. 3. ಸಂಯುಕ್ತ ಕ್ರಿಯಾಪದದ ಪುರುಷಾತ್ಮಕ ರೂಪ.—ಅವನು ನೋಡುತಿದ್ದಾನೆ. 4. ಸಾನುಬಂಧ ಕ್ರಿಯಾಪದ.—ನಾನು ಹೇಳಲಾರೆನು. 5. ಉಪಕ್ರಿಯಾ ಸಂಯುಕ್ತ ಕ್ರಿಯಾಪದದ ಪುರುಷಾತ್ಮಕರೂಪ.—ಆ ಕೆಲಸ ಮಾಡಿ ಕೊಟ್ಟನು.

## IV. ಆಖ್ಯಾಖ್ಯಾತ ಸಮಾಪಕ ವಿಶೇಷಣಗಳು.

1. ವಿಶೇಷಣ ಪದ.—ಉತ್ತಮ ಅರಸನು ತನ್ನ ಸೇವಕರಾದ ರಾಜ್ಯದ ಜನರನ್ನು ಪೀಡಿಸನು. 2. ವಿಶೇಷಣವಾಗಿ ಪ್ರಯೋಗಿಸಿದ ಶಬ್ದ.—ಕ ಅಕ್ಷರ ಬರದದೆ. ಅದು ಹೋಗೆಂಬ ಶಬ್ದ. 3. ಎಲ್ಲಾ ತರದ ವಾಕ್ಯಾಂಗಗಳು.—ಅಂಕೆ ಇಲ್ಲದ ಕಪಿ ಲಂಕೆ ಸುಟ್ಟಿತು. ರಾಮ ಬಿತ್ತಿದ್ದರ ಬೀಜವಿದು. 4. ಸಂಬಂಧಿತ ಉಪವಾಕ್ಯ.—ಯಾವನು ಪೇಟೆಯಲ್ಲಿರುತ್ತಾನೋ ಆ ಮನುಷ್ಯನಿಗೆ ಪೇಟೆಯ ಸುದ್ದಿ ಯಾಕೆ? 5. ಸೂಚಿತ ಉಪವಾಕ್ಯ.—ಪೇಟೆಗೆ ಬಟ್ಟೆ, ಪಟ್ಟಣಕ್ಕೆ ಸಟ್ಟೆ ಎಂಬ ವಚನ ಲೋಕರೂಢಿ.

## V. ಆಖ್ಯಾತ ವಿಶೇಷಣ,

1. ಸ್ಥಾನ, ಕಾಲ, ರೀತ್ಯರ್ಥಕ ಕ್ರಿಯಾ ವಿಶೇಷಣ. ಉದಾ: ರಾಮನನ್ನು ಈಗ ಇಲ್ಲಿ ಬೇಗ ಕರತಾ. 2. ತೃತೀಯೆ, ಚತುರ್ಥಿ, ಪಂಚಮಿ, ಸಪ್ತಮಿ ವಿಭಕ್ತಿರೂಪ. ಉದಾ: ಮನೆಗೆ ಬಂದನು. ಕಾಲಿಂದ ಒದ್ದನು. ಮಣೆಯಲ್ಲ ಕೂತನು. 3. ಅವ್ಯಯಾತ್ಮಕ ರೂಪ. ಉದಾ: ತಿಳಿಯದೆ ಮಾಡಿದನು. ನೋಡಲಿಕ್ಕೆ ಹೇಳು. 4. ಉಪಸರ್ಗ ಸಹಿತವಾದ ವಿಶೇಷಣಪದ. ಉದಾ: ಬಂದ ಮೇಲೆ ಹೇಳು. ತಿಂದವನ ಮೇಲೆ ಬೀಳು. 5. ಎಲ್ಲಾ ತರದ ವಾಕ್ಯಾಂಗ. ಉದಾ: ವಸಂತ ಬರಲು ಕೋಗಿಲೆ ಕೂಗುವದು. ಮಳೆಗರೆಯುದೆ ಬೆಳೆ ಉರಿಯಿತು. ಕೋಣ ಬೆಳದರೆ ಆನೆಯಾದೀತೇ. ಗತಿ ಇಲ್ಲದವನಿಗೆ ಮತಿ ಇಲ್ಲ. 6. ಸಂಬಂಧಿತ ಮತ್ತು ಸೂಚಿತ ಉಪವಾಕ್ಯಗಳು. ಉದಾ: ಹ್ಯಾಗೆ ಮಾಡ ಬೇಕೋ ಹಾಗೆ ಹೇಳು. ತನಗೆ ಯಾರೂ ಸರಿಯಿಲ್ಲ ಎಂತ ನಡಕೊಳ್ಳುತ್ತಾನೆ.

127. ತಮ್ಮೊಳಗೆ ಸಂಪೂರ್ಣ ಆಲೋಚನೆ ಕೊಡುವ ಎರಡು ಯಾ ಹೆಚ್ಚು ವಾಕ್ಯಗಳು ಒಂದಕ್ಕೊಂದು ಸಂಬಂಧ ತೋರಿಸಿ ತಮ್ಮೊಳಗೆ ಒಂದಕ್ಕೊಂದು ಸಮಾನವಾಗಿದ್ದರೆ ಆ ವಾಕ್ಯಗಳಿಗೆ ಸ್ವತಂತ್ರ ವಾಕ್ಯವೆಂಬ ಹೆಸರು. ಈ ಸ್ವತಂತ್ರ ವಾಕ್ಯಗಳು ಸಮುಚ್ಚಾಯಕಾವ್ಯಯಗಳಾದ ಸಂಬಂಧಕಾವ್ಯಯಗಳಿಂದ ಒಂದಕ್ಕೊಂದು ಸೇರಿಸಲ್ಪಡುವ ಕಾರಣ ಸಂಬಂಧವಾಕ್ಯಗಳೆಂತಲೂ, ಅನ್ನಿಸಿ ಕೊಳ್ಳುವವು. ಅವುಗಳಲ್ಲಿ ಮೊದಲು ಬಂದ ವಾಕ್ಯವು ಪೂರ್ವ ವಾಕ್ಯವೆಂತಲೂ, ಅದರ ನಂತ್ರ ಬಂದ ವಾಕ್ಯವು ಉತ್ತರ ವಾಕ್ಯವೆಂತಲೂ, ಅನ್ನಿಸಿ ಕೊಳ್ಳುವದು.

128. ಪೂರ್ವ ವಾಕ್ಯಕ್ಕೆ ಉತ್ತರ ವಾಕ್ಯವು "ಮತ್ತು" ಎಂದರ್ಥವಾಗುವ ಅವ್ಯಯಗಳಿಂದ ಸೇರಿಸಲ್ಪಟ್ಟು, ಅನುಕೂಲ್ಯಸಂಭಂಧವಾಕ್ಯ ಎಂದೂ, "ಅಥವಾ" ಎಂದರ್ಥವಾಗುವ ಅವ್ಯಯಗಳಿಂದ ಸೇರಿಸಲ್ಪಟ್ಟು, ಉಭಯಾತ್ಮಕಸಂಬಂಧವಾಕ್ಯವೆಂದೂ, "ಆದರೆ" ಎಂದರ್ಥವಾಗುವ ಅವ್ಯಯಗಳಿಂದ ಸೇರಿಸಲ್ಪಟ್ಟು ವ್ಯತಿರೇಕಾರ್ಥಕಸಂಬಂಧವಾಕ್ಯವೆಂದೂ, ಕಾರಣಾರ್ಥಕ ಅವ್ಯಯಗಳಿಂದ ಸೇರಿಸಲ್ಪಟ್ಟು ಹೇತ್ವರ್ಥಕಸಂಬಂಧವಾಕ್ಯವೆಂ

ದೂ, "ಅಂದರೆ" ಎಂದರ್ಥವಾಗುವ ವಿವರಾರ್ಥಕ ಅವ್ಯಯುಗಳಿಂದ ಸೇರಿಸಲ್ಪಟ್ಟ ವ್ಯಾಖ್ಯಾರ್ಥಕಸಂಬಂಧವಾಕ್ಯವೆಂದೂ ಅನ್ನಿಸಿ ಕೊಳ್ಳುವದು. ಉದಾ:

ಅನುಕೂಲ್ಯ ಸಂಬಂಧ ವಾಕ್ಯಕ್ಕೆ—ಎತ್ತುಗಳು ಗದ್ದೆ ಹೂಡುತ್ತವೆ, ಇನ್ನೂ ಭಂಡಿ ಎಳೆಯುತ್ತವೆ, ಹಾಂಗೂ ಹೊರೆ ಹೊರುತ್ತವೆ.

ಉಭಯಾತ್ಮಕ ಸಂಬಂಧ ವಾಕ್ಯಕ್ಕೆ—ಹುಡುಗರು ವಿದ್ಯೆ ಕಲಿಯ ಬೇಕು, ಅಥವಾ ವ್ಯಾಪಾರ ಮಾಡ ಬೇಕು, ಇಲ್ಲವೆ ವ್ಯರ್ಥವಾಗಿ ಕೆಟ್ಟು ಹೋಗುವರು.

ವ್ಯತಿರೇಕಾರ್ಥಕ ಸಂಬಂಧ ವಾಕ್ಯಕ್ಕೆ—ಹಲವರು ಒಳ್ಳೇ ಉಪಾಯುವನ್ನು ಬಲ್ಲರು ಆದರೆ ಅದನ್ನು ತಕ್ಕ ಹಾಗೆ ನಡಿಸಲಿಕ್ಕೆ ತಿಳಿಯರು.

ಹೇತ್ವರ್ಥಕ ಸಂಬಂಧ ವಾಕ್ಯಕ್ಕೆ—ಮೂರ್ಖರು ಹೇಳಿದ್ದನ್ನು ಕೇಳರು ಆದದರಿಂದ ಅವರು ಯಾವಾಗಲೂ ಕೆಟ್ಟವರೆನ್ನಿಸಿ ಕೊಳ್ಳುವರು.

ವ್ಯಾಖ್ಯಾರ್ಥಕ ಸಂಬಂಧ ವಾಕ್ಯಕ್ಕೆ—ಮನುಷ್ಯರೆಲ್ಲಾ ಮರ್ತ್ಯರೇ ಅಂದರೆ ಅವರೆಲ್ಲಾ ಸಾಯುವವರೇ.

129. ಮೇಲೆ ವಿವರಿಸಿದ ಪ್ರಕಾರವಾಗಿ ಯಾವದೊಂದು ವಾಕ್ಯವನ್ನು ಹ್ಯಾಗೆ ಕಟ್ಟ ಬಹುದೆಂದೂ, ಅದರ ಒಳಭಾಗಗಳೂ ಹ್ಯಾಗೆ ಹ್ಯಾಗೆ ಏನೇನು ಆಗಿರ ಬಹುದೆಂದೂ, ಅವುಗಳು ಒಂದಕ್ಕೊಂದು ಯಾವ್ಯಾವ ಸಂಬಂಧದಲ್ಲಿ ಹ್ಯಾಗಿರ ಬೇಕೆಂದು ಕೂಡ ವಿವರಿಸಿ ಸೂಚಿಸುವ ಕ್ರಮಕ್ಕೆ ವಾಕ್ಯರಚನೆ ಅನ್ನುವರು. ಹೀಗೆ ವಾಕ್ಯರಚನೆಗೆ ಅನುಸಾರವಾಗಿ ಕಟ್ಟಲ್ಪಟ್ಟ ವಾಕ್ಯ ವಿವರಿಸಿ ಅದರ ಒಳಭಾಗಗಳನ್ನೂ, ಸಮಾನ ಭಾಗಗಳನ್ನೂ ವಿಂಗಡಿಸಿ, ಆ ಭಾಗಗಳು ಒಂದಕ್ಕೊಂದು ಯಾವ್ಯಾವ ಸಂಬಂಧದಲ್ಲಿರುತ್ತವೆ ಎಂದು ತೋರಿಸಿ ವಿಂಗಡಿಸುವ ಕ್ರಮಕ್ಕೆ ವಾಕ್ಯ ವಿಭಜನೆ ಅನ್ನುವರು.

## ವಾಕ್ಯವಿಭಜನೆ.

130. ವಾಕ್ಯಗಳನ್ನು ವಿಭಜನೆ ಮಾಡುವಾಗ ವಾಕ್ಯರಚನೆಗೆ ಅನುಸಾರವಾಗಿ ಕಟ್ಟಿದ ವಾಕ್ಯಗಳಲ್ಲಿ ಮುಖ್ಯವಾಗಿ 3 ತರದ ವಾಕ್ಯಗಳನ್ನು ವಿಶೇಷ ತಕ್ಕದ್ದು. ಹ್ಯಾಗಂದರೆ:

1. ಪುರುಷಾತ್ಮಕ ರೂಪವಾದ ಒಂದೇ ಆಖ್ಯಾತವಿದ್ದು, ಉಳಿದ ಭಾ
ಗಗಳು ಸಾಮಾನ್ಯ ಪದಗಳಾಗಿಯಾಗಲಿ, ವಾಕ್ಯಾಂಗಗಳಾಗಿಯಾಗಲಿ, ಇರು
ವ ವಾಕ್ಯವು ಸಾಮಾನ್ಯವಾಕ್ಯವು. ಉದಾ: ದೇವರು ಭೂಮಿಯನ್ನು ಒಂ
ದೇ ದಿವಸದಲ್ಲಿ ಸೃಷ್ಟಿಸಿದನು. ಸರ್ವರಿಗೂ ಒಡೆಯನಾದ ದೇವರು ನಾವಿ
ರುವ ಈ ಜಗತ್ತನ್ನು, ನಮ್ಮನ್ನು ಸೃಷ್ಟಿಸುವ ಮೊದಲೇ ಸೃಷ್ಟಿಸಿದ್ದಾನೆ.

2. ಒಂದು ಪ್ರಧಾನ ವಾಕ್ಯವೂ ಅದಕ್ಕೆ ಅಧೀನವಾದ ಪೂರ್ಣ ಉ
ಪವಾಕ್ಯವೂ ಇದ್ದರೆ ಅಂಥ ವಾಕ್ಯವು ಸಂಮಿಶ್ರಿತ ವಾಕ್ಯವಾಗಿದೆ. ಉದಾ:
ಮನುಷ್ಯರು ಮರ್ತ್ಯರೇ ಎಂಬ ಮಾತು ಸತ್ಯ ಎಂದು ಯಾರು ಮನುಷ್ಯ
ರೋ ಅವರು ಬಲ್ಲರು.

3. ಒಂದಕ್ಕೊಂದು ಸಮಾನವಾದ ಸ್ವತಂತ್ರ ವಾಕ್ಯಗಳು ಎರಡು
ಯೂ ಹೆಚ್ಚು ಇದ್ದರೆ ಸಂಯೋಜಿತವಾಕ್ಯ ವಾಗಿರುತ್ತದೆ. ಉದಾ: ಮನು
ಷ್ಯರಾದ ನಾವು ನಮ್ಮ ಹತ್ತಿರ ಯಾವ ಮೃಗಗಳು ಅವೆ ಎಂದು ತಿಳಿ
ಅವುಗಳನ್ನು ಹ್ಯಾಗೆ ಸಾಕ ಬೇಕೋ ಹಾಗೆ ನಡಿಸಿದರೆ ಅವು ನಮಗೆ ವಿಧೇ
ಯುವಾಗಿರುವವು; ಇಲ್ಲವಾದರೆ ಅವುಗಳು ನಮ್ಮನ್ನು ಪ್ರೀತಿ ಮಾಡವು.

131. ಯಾವದೊಂದು ವಾಕ್ಯದ ವಿಭಾಗಗಳನ್ನೂ, ತರವನ್ನೂ ಕ್ರ
ಮವಾಗಿ ಕಾಣಿಸುವ ಹಾಗೆ ಮಾಡಿದ ಪಟ್ಟಿಗೆ ವಾಕ್ಯ ವಿಭಜನೆಯ ಸಂಸ್ಥಾ
ಯುವೆಂಬ ಹೆಸರು.

ಈ ಕೆಳಗೆ ವಾಕ್ಯವನ್ನು ಒಪ್ಪೆರೀತಿಯಾಗಿ ವಿಭಾಗಿಸ ಬಹುದಾದ ಸಂ
ಸ್ಥಾ್ಯಯುವನ್ನು ಉದಾಹರಣೆ ಸಹಿತ ಕಾಣಿಸಲಾಗಿದೆ.

# ವಾಕ್ಯವಿಭಜನೆಯ ಸಂಸ್ಕಾರ್ಯವು.

## 1. ಸಾಮಾನ್ಯ ವಾಕ್ಯಗಳು.

1. ದಿಲ್ಲಿಯ ಅರಸನಾದ ಔರಂಗಜೇಬನು ನಿಷ್ಕರುಣೆಯಿಂದ ತನ್ನ ಅಣ್ಣನಾದ ದಾರನನ್ನು ಕೊಂದು ಹಾಕಿದನು.

2. ಸೂರ್ಯವಂಶದಲ್ಲಿ ಹುಟ್ಟಿದ ಅರಸನಾದ ಮರುತ್ತನು, ತನ್ನ ನಿಜಯೋಗ ಶಕ್ತಿಯಿಂದ, ನಾವೀಗ ಇರುವ ಈ ಜಗತ್ತನ್ನು, ಸೃಷ್ಟಿ ಕರ್ಮಗಳ ಮರ್ಯಾದೆಯು ತಪ್ಪದಂತೆ, ಏಕಛತ್ರಾಧಿಪತಿಯಾಗಿ ಹೊರೆಯುತ್ತಿರ್ದನು.

| ವಾಕ್ಯಸಂಖ್ಯೆ | ವಾಕ್ಯ. | ವಾಕ್ಯಾಂತರ ಮತ್ತು ಸಂಬಂಧ. | ಆಖ್ಯೆ. | ಆಖ್ಯೆಯ ವಿಶೇಷಣ. | ಆಖ್ಯಾತ ಸಮಾಪಕ. | ಆಖ್ಯಾತ ಸಮಾಪಕ ವಿಶೇಷಣ. | ಆಖ್ಯಾತ. | ಆಖ್ಯಾತ ವಿಶೇಷಣ. |
|---|---|---|---|---|---|---|---|---|
| 1. | ದಿಲ್ಲಿಯ ಅರಸನಾದ .........ಹಾಕಿದನು. | ಮುಖ್ಯವಾದ ವಾಕ್ಯ. | ಔರಂಗಜೇಬನು. | ದಿಲ್ಲಿಯ ಅರಸನಾದ. | ದಾರನನ್ನು | ತನ್ನ ಅಣ್ಣನಾದ | ಕೊಂದು ಹಾಕಿದನು | ನಿಷ್ಕರುಣೆಯಿಂದ |
| 2. | ಸೂರ್ಯವಂಶದಲ್ಲಿ ಹುಟ್ಟಿದ.........ಹೊರೆಯುತ್ತಿರ್ದನು. | ಮುಖ್ಯವಾದ ವಾಕ್ಯ. | ಮರುತ್ತನು. | 1. ಸೂರ್ಯವಂಶದಲ್ಲಿ ಹುಟ್ಟಿದ. 2. ಅರಸನಾದ. | ಜಗತ್ತನ್ನು. | 1. ನಾವೀಗ ಇರುವ. 2. ಈ. | ಹೊರೆಯುತ್ತಿರ್ದನು. | 1. ತನ್ನ ನಿಜಯೋಗ ಶಕ್ತಿಯಿಂದ. 2. ಸೃಷ್ಟಿ ಕರ್ಮಗಳ ಮರ್ಯಾದೆಯು ತಪ್ಪದಂತೆ. 3. ಏಕಛತ್ರಾಧಿಪತಿಯಾಗಿ. |

## II. ಸಂಮಿಶ್ರವಾಕ್ಯ.

ಈ ಭೂಮಿಯಲ್ಲಿ ಎಲ್ಲವನ್ನು ಚನ್ನಾಗಿ ತಾನು ಬಲ್ಲೆನು ಎಂದು ಹೇಳುವ ಮನುಷ್ಯನು ಜಾತಿಹುಚ್ಚನು ಎಂಬ ಮಾತಿಗೆ, ದೇವರು ಈ ಭೂಮಿಯನ್ನು ಎಷ್ಟರ ವರೆಗೆ ಹೀಗೆ ಇರಿಸುತ್ತಾನೋ ಅಷ್ಟರ ವರೆಗೆ ಸಂಶಯವಿಲ್ಲ, ಎಂದು ಬುದ್ಧಿವಂತರು ಯಾವಾಗಲು ತಿಳಿಯುವರು.

| ವಾಕ್ಯ ಸಂಖ್ಯೆ. | ವಾಕ್ಯ. | ವಾಕ್ಯತರ ಮತ್ತು ಸಂಬಂಧ. | ಆಖ್ಯೆ. | ಆಖ್ಯ ವಿಶೇಷಣ. | ಆಖ್ಯಾತಸಮಾಪಕ. | ಆಖ್ಯಾತ ಸಮಾಪಕ ವಿಶೇಷಣ. | ಆಖ್ಯಾತ. | ಆಖ್ಯಾತ ವಿಶೇಷಣ. |
|---|---|---|---|---|---|---|---|---|
| 1. | ಬುದ್ಧಿವಂತರು ಯಾವಾಗಲೂ ತಿಳಿಯುವರು. | ಪ್ರಧಾನ ವಾಕ್ಯ. 2 ನೇ ವಾಕ್ಯಕ್ಕೆ. | ಬುದ್ಧಿವನ್ತರು | | (2 ನೇ ವಾಕ್ಯ) | | ತಿಳಿಯುವರು. | ಯಾವಾಗಲು. |
| 2. | ಮಾತಿಗೆ ಅಷ್ಟರ ವರೆಗೆ ಸಂಶಯುವಿಲ್ಲ (ಎಂದು). | 1 ನೇ ವಾಕ್ಯದ ಆಧೀನ ನಾಮಾತ್ಮಕ ವಾಕ್ಯ. | ಸಂಶಯು | | | | ಇಲ್ಲ. | 1. ಮಾತಿಗೆ. |
| 3. | ದೇವರು ಈ ಭೂಮಿಯನ್ನು ಎಷ್ಟರ ವರೆಗೆ ಹೀಗೆ ಇರಿಸುತ್ತಾನೋ. | 2ನೇದಕ್ಕೆ ಆಧೀನವಾದ ಕ್ರಿಯಾವಿಶೇಷಣಾತ್ಮಕ ವಾಕ್ಯ. | ದೇವರು. | | ಭೂಮಿಯಂನು | ಈ. | ಇರಿಸುತ್ತಾನೆ. (ಓ) | 2. ಅಷ್ಟರ ವರೆಗೆ. ಎಷ್ಟರ ವರೆಗೆ. |
| 4. | ಹೇಳುವ ಮನುಷ್ಯನು ಜಾತಿಹುಚ್ಚನು (ಎಂಬ) | 2 ನೇದಕ್ಕೆ ಆಧೀನವಾದ ಗುಣಾತ್ಮಕ ವಾಕ್ಯ | ಮನುಷ್ಯನು. | ಹೇಳುವ. | ಹುಚ್ಚನು. | | (ಆಗಿರುತ್ತಾನೆ) | 1. ಈ ಭೂಮಿಯಲ್ಲಿ. |
| 5. | ಈ ಭೂಮಿಯಲ್ಲಿ ಎಲ್ಲವನ್ನು ತಾನು ಚನ್ನಾಗಿ ಬಲ್ಲೆನು (ಎಂದು). | 4ನೇದಕ್ಕೆ ಆಧೀನವಾದನಾಮಾತ್ಮಕವಾಕ್ಯ. | ತಾನು. | | ಎಲ್ಲವನ್ನು. | | ಬಲ್ಲೆನು. | 2. ಚನ್ನಾಗಿ. |

## III. ಸಂಯೋಜಿತವಾಕ್ಯ.

ನಿರ್ಜರರು ನಮ್ಮಂತೆ ದೇಹಧಾರಿಗಳಲ್ಲ; ಹಾಗೂ ಪಾಪಾತ್ಮರಲ್ಲ; ಇಲ್ಲವಾದರೆ ಮರಣ ಪಡುತ್ತಿದ್ದರು; ಆದರೆ ನಾವು ಪಾಪ ಮಾಡತಕ್ಕ ದೇಹಧರಿಸಿದ್ಧೇವೆ; ಆದ್ದರಿಂದ ಮರ್ತ್ಯರೇ; ಅಂದರೆ ಎಂದಿಗೂ ನಾವು ಸಾಯುವವರೇ.

| ವಾಕ್ಯ ಸಂಖ್ಯೆ. | ವಾಕ್ಯ. | ವಾಕ್ಯತರ ಮತ್ತು ಸಂಬಂಧ. | ಆಖ್ಯೆ. | ಆಖ್ಯೆವಿಶೇಷಣ | ಅಖ್ಯಾತಸಮಾಪಕ. | ಆಖ್ಯಾತಸಮಾಪಕ-ವಿಶೇಷಣ. | ಅಖ್ಯಾತ. | ಅಖ್ಯಾತವಿಶೇಷಣ. |
|---|---|---|---|---|---|---|---|---|
| 1. | ನಿರ್ಜರರು ನಮ್ಮಂತೆ ದೇಹಧಾರಿಗಳಲ್ಲ. | ಕೆಳಗಿನವುಗಳಿಗೆ ಸಮಾನಸಂಬಂಧವಾಕ್ಯ. | ನಿರ್ಜರರು. | | ದೇಹಧಾರಿಗಳು | | ಅಲ್ಲ. | ನಮ್ಮಂತೆ. |
| 2. | (ಹಾಗೂ) ಪಾಪಾತ್ಮರಲ್ಲ. | ಅನೂಕೂಲ್ಯ ಸಂಬಂಧವಾಕ್ಯ. | (ಅವರು) | | ಪಾಪಾತ್ಮರು | | ಅಲ್ಲ. | |
| 3. | (ಇಲ್ಲವಾದರೆ) ಮರಣ ಪಡುತ್ತಿದ್ದರು. | ಉಭಯಾತ್ಮಕ ಸಂಬಂಧವಾಕ್ಯ. | (ಅವರು) | | ಮರಣ | | ಪಡುತ್ತಿದ್ದರು. | |
| 4. | (ಆದರೆ) ನಾವು ಪಾಪ ಮಾಡ ತಕ್ಕ ದೇಹ ಧರಿಸಿದ್ಧೇವೆ. | ವ್ಯತಿರೇಕಾರ್ಥಕಸಂಬಂಧವಾಕ್ಯ. | ನಾವು | | ದೇಹ | ಪಾಪ ಮಾಡ ತಕ್ಕ. | ಧರಿಸಿದ್ಧೇವೆ. | |
| 5. | (ಆದ್ದರಿಂದ) ಮರ್ತ್ಯರೇ. | ಹೇತ್ವರ್ಥಕಸಂಬಂಧವಾಕ್ಯ. | (ನಾವು) | | ಮರ್ತ್ಯರು(ವಿ) | | (ಆಗಿದ್ಧೇವೆ) | |
| 6. | (ಅದರೆ) ಎಂದಿಗೂ ನಾವು ಸಾಯುವವರೇ. | ವ್ಯಾಖ್ಯಾರ್ಥಕಸಂಬಂಧವಾಕ್ಯ. | ನಾವು. | | ಸಾಯುವವರು (ವಿ) | | (ಆಗಿದ್ಧೇವೆ) | ಎಂದಿಗೂ. |

(ಇಲ್ಲಿ ತಿಳಿಯತಕ್ಕದ್ದೇನಂದರೆ:—ಮೇಲಿನ ಪಟ್ಟಿಯಲ್ಲಿ ( ) ಈ ಆವರಣ ಚಿನ್ಹೆಯಲ್ಲಿ ತೋರುವ ಪದಗಳು ವಾಕ್ಯದಲ್ಲಿ ಲೋಪವಾದ ಪದಗಳು ಇಲ್ಲವೆ ವಾಕ್ಯದ ಆಖ್ಯಾತಕ್ಕೆ ಸಂಬಂಧವಿಲ್ಲದ ಬರೇ ಸಮುಚ್ಚಾಯಕ ಪದಗಳಾಗಿರುತ್ತವೆ. ವಾಕ್ಯಾಂಗಗಳಲ್ಲಿ ಪೂರ್ಣ ಉಪವಾಕ್ಯದಷ್ಟು ಸಂಪೂರ್ಣ ಆಲೋಚನೆ ಇಲ್ಲವಾದರಿಂದ, ಅವುಗಳನ್ನು ಪ್ರತ್ಯೇಕವಾಗಿ ವಿಂಗಡಿಸಲಿಲ್ಲ. ಭಿನ್ನಕರ್ತೃವಿರುವ ವಾಕ್ಯಾಂಗವು ಬಹುಶಾ ಪೂರ್ಣ ಉಪವಾಕ್ಯದಷ್ಟು ಆಲೋಚನೆ ಕೊಟ್ಟರೂ, ಅದರಲ್ಲಿ ಮುಖ್ಯ ಆಖ್ಯಾತ ಪದವಿಲ್ಲ. ಇಂಥವುಗಳನ್ನು ಕೆಲವರು ಅಪೂರ್ಣ ಕ್ರಿಯೆಗೆ ಆಖ್ಯಾತರೂಪ ಕೊಟ್ಟು ಅಧೀನ ವಾಕ್ಯವಾಗಿ ಗ್ರಹಿಸಿದ್ದಾರೆ. ಆದರೆ ಹೀಗೆ ಪ್ರತಿ ಒಂದು ಕ್ರಿಯಾರೂಪವನ್ನೂ ಮಾಡಬಹುದ್ದಾಗಿದ್ದು, ಹಾಗೆ ಮಾಡುವದು ಯುಕ್ತ ತೋರದೆ ಈ ವ್ಯಾಕರಣದಲ್ಲಿ ಅವುಗಳನ್ನು ಬರೇ ವಾಕ್ಯಾಂಗಗಳಾಗಿಯೇ ತಕ್ಕೊಂಡದೆ).

132. ಒಂದು ವಾಕ್ಯದಲ್ಲಿ ಇರುವ ಮುಖ್ಯ ಪದಗಳಾದ ಆಖ್ಯೆ ಆಖ್ಯಾತ ಕರ್ಮಪದಗಳ ಪ್ರಯೋಗವು ಹ್ಯಾಗಂದರೆ:—

1. ವಾಕ್ಯದಲ್ಲಿಯ ಆಖ್ಯೆಗೆ ಯಾವ ಪುರುಷ ಲಿಂಗ ಮತ್ತು ವಚನಗಳು ಇರುತ್ತವೋ ಅದೇ ಪುರುಷ ಲಿಂಗ ವಚನಗಳು ಆಖ್ಯಾತಕ್ಕೂ ಇರಬೇಕು. ಉದಾ: ನಾನು ಬರುತ್ತೇನೆ. ನೀವು ಕಲಿಯುತ್ತೀರಿ. ಹುಡುಗರು ಓಡುತ್ತಾರೆ. ಹುಡಿಗಿಯು ನಡಿಯುತ್ತಾಳೆ. ಕೋಳಿ ಕೂಗುತ್ತದೆ. ಪಕ್ಷಿಗಳು ಹಾರುತ್ತವೆ ಇತ್ಯಾದಿ.

## ಇದಕ್ಕೆ ಅಪವಾದಗಳು.

1. ಮಧ್ಯಮ ಪುರುಷ ಏಕವಚನವಾದ ನೀನು ಎಂಬದಕ್ಕೆ ಪೂಜಾರ್ಥದಲ್ಲಿ ಉಪಯೋಗಿಸಲ್ಪಡುವ ತಾವು ಎಂಬದಕ್ಕೆ ಆಖ್ಯಾತವು ಬಹುವಚನವಾಗಿರುವದು. ಉದಾ: ತಾವು ಯಾವಾಗ ಬಂದಿರಿ? ಈ ಪ್ರಕಾರ ಬಂದ ತಾವು ಎಂಬದು ಮಧ್ಯಮ ಪುರುಷ ಏಕವಚನ ಪೂಜಾರ್ಥವೆಂದು ತಿಳಿಯಬೇಕಲ್ಲದೆ ಆತ್ಮಾರ್ಥಕ ಸರ್ವನಾಮವೆಂದು ತಿಳಿಯಲಾಗದು.

II. ದೇವರು ಎಂಬ ಬಹುವಚನರೂಪಕ್ಕೆ ಆಖ್ಯಾತವು ಏಕವಚ

ನವಾಗಿರುವದು. ಉದಾ: ದೇವರು ಎಲ್ಲಾ ಕಡೆಯಲ್ಲಿ ಇದ್ದಾನೆ ಎಂಬದೆನ್ನು ಸರ್ವರೂ ಬಲ್ಲರು.

III. ಸಂಖ್ಯಾ ವಿಶೇಷಣದಿಂದ ವಿಶೇಷಿಸಲ್ಪಟ್ಟ ನಪುಂಸಕ ನಾಮಪದಗಳಾದ ಆಖ್ಯೆಗಳಿಗೆ ಏಕವಚನ ಬಂದಾಗ್ಯೂ ಆಖ್ಯಾತವು ಬಹುವಚನವಾಗಿರುವದು. ಉದಾ: ಮನುಷ್ಯರಿಗೆ ಎರಡು ಕಾಲು ಇರುತ್ತವೆ ಸರಿ; ಆದರೂ ಮೃಗಗಳಿಗೆ ನಾಲ್ಕು ಕಾಲು ಇರುತ್ತವಲ್ಲವೋ?

IV. ಕಾವ್ಯಗಳಲ್ಲಿ ಲಿಂಗಪಲ್ಲಟ ಮತ್ತು ವಚನಪಲ್ಲಟವಾಗುವದು ಬಹಳ ಉಂಟು. ಉದಾ: ಪದಾತಿ ಮೂರರ್ಬುದಂ ಜೋಡಿಸಿದುದಾಹವಪ್ರೌಢರ್ ಸುಬುದ್ಧಿ ಮೊದಲಾದ ಭಟರು. ದಿವದೊಳ್ ತಾರಕಿಗಳ್ ಮೂಡಿದುದು ಇತ್ಯಾದಿ. ಈ 2 ವಾಕ್ಯಗಳೊಳಗೆ ಮೊದಲನೇ ವಾಕ್ಯದ ಆಖ್ಯೆ "ಭಟರು" ಎಂಬದು ಪುಲ್ಲಿಂಗ ಬಹುವಚನವಾದಾಗ್ಯೂ ಅದಕ್ಕೆ "ಜೋಡಿಸಿದುದು" ಎಂಬ ನಪುಂಸಕಲಿಂಗ ಏಕವಚನದ ಆಖ್ಯಾತವು ಬಂತು; ಎರಡನೇ ವಾಕ್ಯದ ಆಖ್ಯೆ "ತಾರಕಿಗಳ್" ಎಂಬದು ಬಹುವಚನವಾದಾಗ್ಯೂ ಅದಕ್ಕೆ "ಮೂಡಿದುದು" ಎಂಬ ಏಕವಚನದ ಆಖ್ಯಾತವು ಬಂತು.

2. ಏಕವಚನವಾದ ಅನೇಕ ಆಖ್ಯೆಗಳ ಮುಂದೆ ಆಖ್ಯಾತಕ್ಕೆ ಬಹುವಚನ ಬರುವದು. ಉದಾ: ಸೇವಕನೂ ಒಡೆಯನೂ ಬಂದರು. ದನವೂ ಕರುವೂ ಓಡಿದವು ಇತ್ಯಾದಿ.

3. ಭಿನ್ನ ಪುರುಷವಾದ ಅನೇಕ ಆಖ್ಯೆಗಳ ಮುಂದೆ ಆಖ್ಯಾತವು ಅಧಿಕ ಪುರುಷಕ್ಕೆ ಅನುಸಾರವಾಗಿ ಬರುವದು; ಪ್ರಥಮ ಪುರುಷಕ್ಕೆ ಮಧ್ಯಮ ಪುರುಷ, ಮಧ್ಯಮ ಪುರುಷಕ್ಕೆ ಉತ್ತಮ ಪುರುಷ ಕೂಡ ಅಧಿಕ ಪುರುಷವಾಗಿರುತ್ತದೆ. ಉದಾ: ನೀನೂ ಅವನೂ ಬಂದಿರಿ. ಅವನೂ ನಾನೂ ಹೋದೆವು. ನಾನೂ ನೀನೂ ನಮ್ಮ ಸೇವಕನೂ ಹೋಗುವೆವು ಇತ್ಯಾದಿ.

4. ಭಿನ್ನ ಲಿಂಗವಾದ ಅನೇಕ ಆಖ್ಯೆಗಳ ಮುಂದೆ ಆಖ್ಯಾತಕ್ಕೆ ಕಡೇ ಆಖ್ಯೆಯ ಲಿಂಗವು ಬರುವದು. ಉದಾ: ಹುಡುಗನೂ ಹುಡುಗಿಯೂ ನಾಯಿಯೂ ಓಡುತ್ತವೆ. ಹುಡುಗನೂ ನಾಯಿಯೂ ಹುಡುಗಿಯೂ ಓಡುತ್ತಾರೆ ಇತ್ಯಾದಿ.

5. ಅಥವಾ ಎಂಬ ಸಮುಚ್ಚಾಯಕಾವ್ಯಯದಿಂದ ಕೂಡಿಸಲ್ಪಟ್ಟ ಆಖ್ಯೆಗಳಲ್ಲಿ ಆಖ್ಯಾತಕ್ಕೆ ಅಂಥ ಅವ್ಯಯದ ಉತ್ತರದಲ್ಲಿರುವ ಆಖ್ಯೆಯ ಪುರುಷ-ಲಿಂಗ-ವಚನ ಬರುವದು. ಉದಾ: ನಾನು ಅಥವಾ ಅವನು ಬರುತ್ತಾನೆ. ಅವರು ಅಥವಾ ನಾನು ಬರುತ್ತೇನೆ. ನಾವು ಅಥವಾ ಹುಡುಗರು ಬರುತ್ತಾರೆ ಇತ್ಯಾದಿ. ಆಗಲಿ ಎಂಬ ಸಮುಚ್ಚಾಯಕಾವ್ಯಯದಿಂದ ಕೂಡಿಸಲ್ಪಟ್ಟ ಆಖ್ಯೆಗೂ ಇದೇ ಸೂತ್ರ ಸಂಬಂಧಿಸುತ್ತದೆ.

6. ವಾಕ್ಯದಲ್ಲಿ ಕರ್ಮಪದಕ್ಕೆ ದ್ವಿತೀಯೆ ವಿಭಕ್ತಿಯ ಪ್ರತ್ಯಯ ಅಥವಾ ದ್ವಿತೀಯೆ ವಿಭಕ್ತಿಗೆ ಪ್ರತಿಯಾಗಿ ಉಪಯೋಗಿಸಲ್ಪಟ್ಟ ಪ್ರಕೃತಿ ರೂಪವು ಬರುವದು. ಉದಾ: ಬಡಿಗೆಯುವನು ಮರವನ್ನು ಕಡಿದನು. ಬಡಿಗೆಯುವನು ಮರ ಕಡಿದನು ಇತ್ಯಾದಿ.

133. ವಾಕ್ಯದಲ್ಲಿಯ ಆಖ್ಯೆಗೂ ಆಖ್ಯಾತಕ್ಕೂ ಅನೇಕ ಕಡೆಯಲ್ಲಿ ಲೋಪ ಬರುವದು. ವಾಕ್ಯದ ಕ್ರಿಯಾಪದವು ಇರು ಧಾತು ಆಗಿರುವಲ್ಲಿ ಆಖ್ಯಾತಕ್ಕೆ ಲೋಪವು ಹೆಚ್ಚಾಗಿ ಬರುವದು. ಉದಾ: ಹೋಗುತ್ತೇನೆ. ನೋಡು. ಬಂದಳೋ? ಬೊಗಳುತ್ತದೆ. ಈ ವಾಕ್ಯಗಳಲ್ಲಿ "ನಾನು, ನೀನು, ಅವಳು, ನಾಯಿ" ಎಂಬ ಆಖ್ಯೆಗಳಿಗೆ ಲೋಪ ಬಂತು. ಮನೆಯಲ್ಲಿ ಜನರು. ರಣದಲ್ಲಿ ಶೂರರು. ಕಾಡಿನಲ್ಲಿ ಮೃಗಗಳು. ಈ ವಾಕ್ಯಗಳಲ್ಲಿ "ಇರುವರು ಮತ್ತು ಇರುವದು" ಎಂಬ ಆಖ್ಯಾತಗಳಿಗೆ ಲೋಪ ಬಂತು. ಈ ಪ್ರಕಾರ ಲೋಪವಾದ ಪದಗಳಿಗೆ ಅಧ್ಯಾಹಾರ ಎಂಬ ಹೆಸರು.

## ಆಖ್ಯಾತ ಕ್ರಿಯಾಪದಗಳ ಅನ್ವಯಪ್ರಯೋಗಗಳು.

134. ವಾಕ್ಯಗಳಲ್ಲಿ ಉದ್ದೇಶ್ಯ ಪದವಾದ ಆಖ್ಯೆಗೆ ಆಖ್ಯಾತ ಕ್ರಿಯಾಪದಗಳು ಅನ್ವಿತವಾಗುವವು ಮುಖ್ಯ ಪ್ರಯೋಗಗಳಾದ ಕರ್ತರಿಪ್ರಯೋಗ ಕರ್ಮಣಿಪ್ರಯೋಗ ಆತ್ಮನೆಪದ ಪ್ರಯೋಗ ಮತ್ತು ಭಾವಿ ಪ್ರಯೋಗವೆಂಬ 4 ಪ್ರಯೋಗಗಳ ವಿವರವು ಹ್ಯಾಗಂದರೆ:—

1. ವಾಕ್ಯದಲ್ಲಿ ಹೇಳುವ ಕ್ರಿಯೆಯ ಕರ್ತೃವನ್ನು ಉದ್ದೇಶ್ಯಪದವಾಗಿಟ್ಟು, ಆಖ್ಯಾತ ಕ್ರಿಯೆಯನ್ನು ಆ ಉದ್ದೇಶ್ಯಪದದ ಪುರುಷ-ಲಿಂಗ-ವಚ

ನಗಳಿಗೆ ವಿಧೇಯಿಸಿದರೆ ಕರ್ತರಿಪ್ರಯೋಗವೆನ್ನಿಸುವದು. ಉದಾ: ರಾಮನು ರಾವಣನನ್ನು ಕೊಂದನು.

2. ವಾಕ್ಯದಲ್ಲಿ ಹೇಳುವ ಸಕರ್ಮಕ ಕ್ರಿಯಾಪದಕ್ಕೆ ವಿಷಯವಾದ ಕರ್ಮಪದವನ್ನು ಉದ್ದೇಶ್ಯ ಪದ ಮಾಡಿ, ಕರ್ತೃಪದನನ್ನು ತೃತೀಯೆ ವಿಭಕ್ತಿಯಲ್ಲಿಟ್ಟು, ಆ ಸಕರ್ಮಕ ಕ್ರಿಯಾಪದದ 2ನೇ ಭಾವರೂಪಕ್ಕೆ ಪಡು ಎಂಬ ಸಹಾಯ ಕ್ರಿಯಾಪದವನ್ನು ಕೂಡಿಸುವದರಿಂದ ಉಂಟಾದ ಅನುಬಂಧಿತ ಕ್ರಿಯಾಪದವನ್ನು ಉದ್ದೇಶ್ಯಪದದ ಪುರುಷಲಿಂಗವಚನಗಳಿಗೆ ವಿಧೇಯಿಸಿದರೆ ಕರ್ಮಣಿಪ್ರಯೋಗವೆನ್ನಿಸುವದು. ಉದಾ: ರಾವಣನು ರಾಮನಿಂದ ಕೊಲ್ಲಲ್ಪಟ್ಟನು.

3. ಒಬ್ಬನು ಒಂದು ಕ್ರಿಯೆಯ ಫಲವನ್ನು ತಾನು ಅನುಭವಿಸುವಂತೆ ಆ ಕ್ರಿಯೆಯನ್ನು ಮತ್ತೊಬ್ಬನಿಂದ ಮಾಡಿಸಿದರೆ ಆತ್ಮನೆಪದ ಪ್ರಯೋಗ ಅನ್ನಿಸಿ ಕೊಳ್ಳುತ್ತದೆ. ವಾಕ್ಯದಲ್ಲಿ ಹೇಳುವ ಇಸುಪ್ರತ್ಯಯಾಂತ ಕೃದಂತ ಧಾತುವಿನ ಭೂತನ್ಯೂನಕ್ಕೆ ಕೊಳ್ಳು ಎಂಬ ಉಪಕ್ರಿಯಾಪದದ ಜೋಡಣೆಯಿಂದ ಉಂಟಾದ ಕ್ರಿಯಾಪದವನ್ನು ಉದ್ದೇಶ್ಯಪದದ ಪುರುಷಲಿಂಗವಚನಗಳಿಗೆ ವಿಧೇಯಿಸುವದರಿಂದ ಈ ಪ್ರಯೋಗವು ಆಗುವದು. ಉದಾ: ತಂದೆಯು ಮಗನಿಂದ ನಡಿಸಿಕೊಳ್ಳುತ್ತಾನೆ. ಪ್ರಜೆಗಳು ಅರಸನಿಂದ ಆಳಿಸಿ ಕೊಳ್ಳುತ್ತವೆ. ದೇವರು ತನ್ನ ಭಕ್ತರಿಂದ ಪೂಜಿಸಿ ಕೊಳ್ಳುವನು ಇತ್ಯಾದಿ.

4. ಬಹುದು, ಬಾರದು, ಕೂಡದು, ತಕ್ಕದ್ದು, ಆಗದು, ಆದೀತು, ಆಗುವದು, ಆಗುವದಿಲ್ಲ, ಆಯಿತು ಮುಂತಾದ ನಪುಂಸಕ ಏಕವಚನಗಳಾದ ಅನುಬಂಧ ಕ್ರಿಯಾಪದಗಳ ಪೂರ್ವದಲ್ಲಿ ಧಾತುಗಳ ಭಾವರೂಪಗಳು ಮತ್ತು ಕ್ರಿಯಾ-ನಾಮಗಳು ಉದ್ದೇಶ್ಯ ಪದಗಳಾಗಿ ನಿಲ್ಲುವ ಪ್ರಯೋಗವು ಕನ್ನಡದಲ್ಲಿ ಬಹಳ ಉಂಟು; ಇಂಥ ಪ್ರಯೋಗಕ್ಕೆ ಭಾವಿ ಪ್ರಯೋಗವೆಂಬ ಹೆಸರು. ಉದಾ: ನೀನು ಹಾಗೆ ಮಾಡಲು ಬಹುದು. ಹುಡುಗರು ಸುಳ್ಳು ಹೇಳ ಬಾರದು. ನೀನು ಬಾರದಿರುವದು ಆಗದು ಇತ್ಯಾದಿ.

135. ನಾಮಪದಗಳು, ವಿಶೇಷಣಾರ್ಥಕ ನಾಮಗಳು, ಕೃದ್ನಾಮಗಳು, ಕ್ರಿಯಾನಾಮಗಳು ಮತ್ತು ಸರ್ವನಾಮಗಳು—ಇವುಗಳ ಪ್ರಥಮ, ದ್ವಿತೀಯ, ತೃತೀಯ, ಚತುರ್ಥ ಮತ್ತು ಸಪ್ತಮಿ ವಿಭಕ್ತಿಗಳು ಕಾರಕ

ವಿಭಕ್ತಿಗಳಾಗಿರುತ್ತವೆ ಎಂಬದನ್ನು ಹಿಂದೆ 63ನೇ ಅಂಕೆಯಲ್ಲಿ ಹೇಳಿರುತ್ತದೆ. ಪಂಚಮಿ ವಿಭಕ್ತಿಯು ಕಾರಕ ವಿಭಕ್ತಿಯಾಗಿರುವದಾದಾಗ್ಯೂ ಅದರ ಅರ್ಥವನ್ನು ತೃತೀಯ ವಿಭಕ್ತಿಯು ಕೊಡುವ ಕಾರಣ ಅದನ್ನು ಕಾರಕ ವಿಭಕ್ತಿಗಳಲ್ಲಿ ಸೇರಿಸಲಿಲ್ಲ. ಕಾರಕಾರ್ಥವೆಂದರೆ—ಒಂದು ಕ್ರಿಯೆಯನ್ನು ಹುಟ್ಟಿಸಿ, ಅದನ್ನು ಸಂಪೂರ್ಣ ಮಾಡುವ ಅರ್ಥವು. ಮೇಲೆ ಕಾರಕ ವಿಭಕ್ತಿಗಳೆಂದು ಹೇಳಿದ 5 ವಿಭಕ್ತಿಗಳು ಹೇಳುವ ಕಾರಕಾರ್ಥಗಳು ಯಾವವೆಂದರೆ:—

## ಕಾರಕ-ವಿಭಕ್ತಿಗಳ ಪ್ರಯೋಗ.

I. ಪ್ರಥಮೆ—1. ಕರ್ತರಿ ಪ್ರಯೋಗದಲ್ಲಿಯೂ ಆತ್ಮನೆಪದ ಪ್ರಯೋಗದಲ್ಲಿಯೂ ಕರ್ತೃವಿಗೂ, 2. ಭಾವಿ ಪ್ರಯೋಗದಲ್ಲಿ ಉದ್ದೇಶ್ಯ ಪದಗಳಾಗಿ ನಿಲ್ಲುವ ಭಾವರೂಪ ಕ್ರಿಯಾನಾಮಗಳಿಗೂ, 3. ಕರ್ಮಣಿ ಪ್ರಯೋಗದಲ್ಲಿ ಕರ್ಮಕ್ಕೂ, 4. ಲಕ್ಷಣವಾಚಕ ಅಖ್ಯಾತಗಳಲ್ಲಿ ಹೇಳಿದ ವಿಧೇಯ ವಿಶೇಷಣಗಳಿಗೂ, 5. ಕಾಲವನ್ನೂ ಮಾರ್ಗದ ಪರಿಮಾಣವನ್ನೂ ಹೇಳುವ ಪದಗಳಿಗೂ, ಪ್ರಥಮೆ ವಿಭಕ್ತಿಯು ಬರುವದು. ಉದಾ:

1. ರಾಮನು ಓದುತ್ತಾನೆ. ಕುರುಡನು ಬೇರೆಯವರಿಂದ ನಡಿಸಿಕೊಳ್ಳುತ್ತಾನೆ. 2. ಹುಡುಗನು ಬೋಧಕನಿಂದ ಕಲಿಸಲ್ಪಡುತ್ತಾನೆ. 3. ನೀನು ಆಡಲು ಬಾರದು. ಹುಡುಗರು ಕಾಡುವದು ಆಗದು 4. ಅವನು ಒಳ್ಳೆಯವನು. 5. ಒಂದು ತಿಂಗಳು ಕಲಿತೆನು. ಎರಡು ಕೊಗಳತೆ ನಡೆದೆನು.

II. ದ್ವಿತೀಯೆ—1. ಸಕರ್ಮಕ ಕ್ರಿಯಾಪದಗಳ ಮುಂದೆ ಕರ್ಮಕ್ಕೂ, 2. ಗಮನಾರ್ಥಕ ಕ್ರಿಯಾಪದಗಳ ಮುಂದೆ ಮಾರ್ಗದ ಪರಿಮಾಣಕ್ಕೂ, 3. ಕಾಲದ ಪರಿಮಾಣವನ್ನು ಹೇಳುವಲ್ಲಿ ಕಾಲವಾಚಕ ಪದಗಳಿಗೂ, ದ್ವಿತೀಯೆ ವಿಭಕ್ತಿಯು ಬರುವದು. ಉದಾ:

1. ಹುಡುಗನು ಪಾಠವನ್ನು ಕಲಿಯುತ್ತಾನೆ. 2. ನಾನು ಒಂದು ಕೊಗಳತೆಯನ್ನು ನಡೆದೆನು. 3. ಇಡೀ ಹಗಲನ್ನು ಆಟದಲ್ಲಿ ಕಳದನು.

ಇದಲ್ಲದೆ ದ್ವಿಕರ್ಮಕ ಕ್ರಿಯಾಪದಗಳಲ್ಲಿ ಬೇಡು, ಬೆಸಗೊಳ್ಳು ಮುಂತಾದ ಕ್ರಿಯಾಪದಗಳ ಮುಂದೆ ಪ್ರಧಾನ ದ್ವಿತೀಯೆ ಬೇಡುವ ವಸ್ತುವನ್ನೂ, ಗೌಣ

ದ್ವಿತೀಯೆ ಯಾರನ್ನು ಬೇಡುತ್ತಾನೋ ಆ ಮನುಷ್ಯನನ್ನೂ, ಹೇಳುವದು. ಉದಾ: ಹುಡುಗನು ಬೋಧಕನನ್ನು ಪುಸ್ತಕವನ್ನು ಬೇಡಿದನು. ಪರೀಕ್ಷಿತಿಯು ಶುಕನನ್ನು ಭಾಗವತ-ಚರಿತ್ರವನ್ನು ಬೆಸಗೊಂಡನು ಇತ್ಯಾದಿ. ದಾನಾರ್ಥಕವಾದ ಕೊಡು, ಒಪ್ಪಿಸು, ಅರ್ಪಿಸು ಮುಂತಾದ ಕ್ರಿಯಾಪದಗಳ ಮುಂದೆ ಪ್ರಧಾನ ದ್ವಿತೀಯೆ ಕೊಟ್ಟ ವಸ್ತುವನ್ನೂ, ಗೌಣ ದ್ವಿತೀಯೆ ಆ ವಸ್ತುವನ್ನು ಏನಾಗಿ ಕೊಟ್ಟನೆಂಬುವದನ್ನೂ, ಹೇಳುವದು. ಉದಾ: ಮೈಸೂರ ಮಹಾರಾಜರು ಬ್ರಾಹ್ಮಣರಿಗೆ ಐನೂರು ದನಗಳನ್ನು ದಾನ ಕೊಟ್ಟರು. ಅಬ್ರಾಹಮನು ದೇವರಿಗೆ ತನ್ನ ಮಗನನ್ನು ಬಲಿಯನ್ನು ಅರ್ಪಿಸಲಿಕ್ಕೆ ಸಿದ್ಧನಾಗಿದ್ದನು ಇತ್ಯಾದಿ. ಪ್ರಯೋಜಕ ಕ್ರಿಯಾಪದಗಳ ಮುಂದೆ ಪ್ರಧಾನ ದ್ವಿತೀಯೆ ಪ್ರಯೋಜ್ಯಕರ್ತೃವನ್ನೂ, ಗೌಣ ದ್ವಿತೀಯೆ ಆ ಕರ್ತೃ ನಡೆಸಿದ ಕ್ರಿಯೆಯ ಕರ್ಮವನ್ನೂ, ಹೇಳುವದು. ಉದಾ: ತಂದೆಯು ಮಗನನ್ನು ಪಾಠವನ್ನು ಓದಿಸುತ್ತಾನೆ. ಮಾಡು ಎಂಬ ಧಾತುವಿಗೆ ರೂಪಿಸು ಅಥವಾ ವಿಕರಿಸು ಎಂಬ ಅರ್ಥಬರುವಲ್ಲಿ ಆ ಧಾತುವಿನ ಮುಂದೆ ಪ್ರಧಾನ ದ್ವಿತೀಯೆ ಆ ಕ್ರಿಯೆಯನ್ನು ಪಡುವ ವಸ್ತುವನ್ನೂ, ಗೌಣ ದ್ವಿತೀಯೆ ಆ ವಸ್ತುವಿಗೆ ಬಂದ ವಿಕೃತಿಯನ್ನು ಹೇಳುವದು. ಉದಾ: ಕುಂಬಾರನು ಮಣ್ಣನ್ನು ಮಡಿಕೆ ಮಾಡುತ್ತಾನೆ. ನಾನು ಇದ್ದ ಚಿನ್ನವನ್ನು ನಗ ಮಾಡಿಸಿದೆನು ಇತ್ಯಾದಿ.

III. ತೃತೀಯೆ—ಈ ವಿಭಕ್ತಿಗೆ ಕರ್ತೃ, ಕರಣ, ಕಾರಣ, ದ್ರವ್ಯ, ರೀತಿ ಮುಂತಾದ ಬೇರೆ ಬೇರೆ ಅರ್ಥಗಳು ಬರುವವು. ಉದಾ: ಕರ್ತೃವಿಗೆ—ಮನೆಯು ಒಡ್ಡಿಗೆಯವರಿಂದ ಕಟ್ಟಲ್ಪಟ್ಟಿತು. ಕರಣಕ್ಕೆ—ಕತ್ತಿಯಿಂದ ಕಡಿದನು. ಕಾರಣಕ್ಕೆ—ಸಾವಕಾರರು ವ್ಯಾಪಾರದಿಂದ ಬೊಂಬಯಿಗೆ ಹೋಗುತ್ತಾರೆ. ದ್ರವ್ಯಕ್ಕೆ—ಚಿನ್ನದಿಂದ ಉಂಗುರ ಮಾಡಿಸಿದನು. ರೀತಿಗೆ—ಹುಡುಗರು [illegible]ದಿಂದ ಕಲಿಯುತ್ತಾರೆ.

ಮೇಲೆ ವಿವರಿಸಿದ್ದು ಮಾತ್ರವಲ್ಲದೆ ಕಾಲವಾಚಕ ಪದಗಳೊಂದಿಗೆ ತೃತೀಯೆ ವಿಭಕ್ತಿಯು ಕ್ರಿಯೆಯ ಆರಂಭವನ್ನು ಹೇಳುವದು. ಉದಾ: ಮಧ್ಯಾಹ್ನದಿಂದ ಕಲಿಯುತ್ತಾನೆ. ಗಮನಾರ್ಥಕ ಕ್ರಿಯಾಪದಗಳ ಮುಂದೆ ತೃ

ತೀಯೆ ವಿಭಕ್ತಿಯು ಹೊರಟ ಸ್ಥಾನವನ್ನು ಹೇಳುವದು. ಉದಾ: ನನ್ನ ತಮ್ಮನು ನಿನ್ನೆ ಉಡ್ಪಿಯಿಂದ ಬಂದನು.

IV. ಚತುರ್ಥಿ—ಈ ವಿಭಕ್ತಿಗೆ ಪಾತ್ರತೆ, ಸ್ವತಂತ್ರ, ನಿಮಿತ್ತ, ಮಿತಿ, ಕ್ರಯ, ವಿಷಯ, ಪ್ರತಿನಿಧಿ ಮುಂತಾದ ಅರ್ಥಗಳು ಬರುತ್ತವೆ. ಉದಾ: ಪಾತ್ರತೆಗೆ—ಉತ್ತಮನಿಗೆ ಮಗಳನ್ನು ಕೊಟ್ಟನು. ಸ್ವತಂತ್ರಕ್ಕೆ—ಮೃಗಗಳಿಗೆ ಜಾಲ ಉಂಟು. ನಿಮಿತ್ತಕ್ಕೆ—ಮಾನಕ್ಕೆ ಒದ್ದಾಡುತ್ತಾನೆ. ಮಿತಿಗೆ—ತಿಂಗಳಿಗೆ ಒಮ್ಮೆ ಪರೀಕ್ಷೆಯಾಗುವದು. ಕ್ರಯಕ್ಕೆ—ಆಣೆಗೆ ಒಂದು ಸೇರು ಅಕ್ಕಿ ಸಿಕ್ಕುವದು. ವಿಷಯಕ್ಕೆ—ಪೆಟ್ಟಿಗೆ ಹೆದರುತ್ತಾನೆ. ಪ್ರತಿನಿಧಿಗೆ—ಬುದ್ಧಿಯಲ್ಲಿ ಅಣ್ಣನಿಗೆ ತಮ್ಮನು ಮೇಲಾಗುವನು.

ಅದಲ್ಲದೆ ಗಮನಾರ್ಥಕ ಕ್ರಿಯಾಪದಗಳ ಮುಂದೆ ಚತುರ್ಥಿ ವಿಭಕ್ತಿಯು ತಲಪುವ ಸ್ಥಳವನ್ನು ಹೇಳುವದು. ಉದಾ: ಯಾತ್ರಸ್ಥರು ಕಾಶಿಗೆ ಹೋಗುತ್ತಾರೆ. ಕಾಲವಾಚಕ ಪದಗಳಲ್ಲಿ ಚತುರ್ಥಿ ವಿಭಕ್ತಿಯು ಕ್ರಿಯೆಯು ನಡೆಯುವ ಕಾಲವನ್ನು ಹೇಳುವದು. ಉದಾ: ರಾತಾರಾತ್ರಿಗೆ ನಡೆದೆವು.

V. ಸಪ್ತಮಿ—ಈ ವಿಭಕ್ತಿಗೆ ಸ್ಥಾನ, ಕಾಲ, ರೀತಿ, ಕರಣ, ಅಧಿಕರಣ, ಭೇದ ಮುಂತಾದ ಅರ್ಥಗಳು ಬರುತ್ತವೆ. ಉದಾ: ಸ್ಥಾನಕ್ಕೆ—ಮನೆಯಲ್ಲಿ ಇದ್ದಾನೆ. ಕಾಲಕ್ಕೆ—ಸಂಜೆಯಲ್ಲಿ ಹೊತ್ತು ಮುಳುಗುತ್ತದೆ. ರೀತಿಗೆ—ಕೃಪೆಯಲ್ಲಿ ಮಾತಾಡಿದನು. ಕರಣಕ್ಕೆ—ಕುದುರೆಯನ್ನು ಚಬುಕಿನಲ್ಲಿ ಹೊಡೆಯ ಬೇಕು. ಅಧಿಕರಣಕ್ಕೆ—ಕಾರ್ಯದಲ್ಲಿ ಶೂರನಾಗಿರುತ್ತಾನೆ. ಭೇದಕ್ಕೆ—ಈ ಹುಡುಗರಲ್ಲಿ ರಾಮನು ಕಿರಿಯನು, ದೇವಪ್ಪನು ಹಿರಿಯನು.

## ಆಖ್ಯಾತ-ಕ್ರಿಯಾಪದಗಳ ಪ್ರಯೋಗ.

136. ಆಖ್ಯಾತ-ಪ್ರತ್ಯಯಗಳೆಂಬ ಪುರುಷ ಪ್ರತ್ಯಯಗಳನ್ನು ಹೊಂದಿದ ವರ್ತಮಾನ, ಭೂತ, ಭವಿಷ್ಯತ್, ಭಾವಿ, ನಿಷೇಧ ಮತ್ತು ವಿಧಿ ಕ್ರಿಯಾಪದಗಳ ಪ್ರಯೋಗದ ವಿವರಣೆಗೆ ಆಖ್ಯಾತ ಕ್ರಿಯಾಪದಗಳ ಪ್ರಯೋಗವೆಂಬ ಹೆಸರು. ಅದು ಹ್ಯಾಗಂದರೆ:—

1. ವರ್ತಮಾನ ಕ್ರಿಯಾಪದಗಳ ಪ್ರಯೋಗ—ಈಗ ನಡೆಯುತ್ತಿ

ರುವ ಕ್ರಿಯೆಯನ್ನು ಹೇಳುವದಕ್ಕೆ ವರ್ತಮಾನ ಕ್ರಿಯಾಪದಗಳು ಉಪಯೋಗಿಸಲ್ಪಡುವವು. ಉದಾ: ನಾನು ಓದುತ್ತೇನೆ. ಹುಡುಗರು ಪಾಠ ಕಲಿಯುತ್ತಾರೆ.

ಕೆಲವು ಕ್ರಿಯೆಗಳು ಮುಂದಕ್ಕೆ ನಡಿಯತಕ್ಕವುಗಳಾದಾಗ್ಯೂ ನಿಶ್ಚಯವಾಗಿ ಅಥವಾ ಅತಿ ತ್ವರೆಯಾಗಿ ಆಗುವವುಗಳಾಗಿದ್ದರೆ ಅಂಥವುಗಳಿಗೆ ಭವಿಷ್ಯದ್ಧರ್ಥದಲ್ಲಿಯೂ ವರ್ತಮಾನ ರೂಪಗಳೇ ಉಪಯೋಗಿಸಲ್ಪಡುವವು. ಉದಾ: ಮತ್ತೆ ಬರುತ್ತೇನೆ. ಈ ಪಾಠವನ್ನು ನಾಳೆ ಕಲಿಸುತ್ತೇನೆ.

2. ಭೂತ ಕ್ರಿಯಾಪದಗಳ ಪ್ರಯೋಗ—ಮುಂಚೆ ನಡದಿರುವ ಕ್ರಿಯೆಗಳಿಗೆ ಭೂತ ಕ್ರಿಯಾಪದರೂಪಗಳು ಉಪಯೋಗಿಸಲ್ಪಡುತ್ತವೆ. ಉದಾ: ಮೊನ್ನೆ ಹೊರಟವನು ಇಂದು ಬೇಗ್ಯೆ ತಲಪಿದನು. ಇದಲ್ಲದೆ ಒಂದು ಕ್ರಿಯೆಯು ಇನ್ನು ಮುಂದಕ್ಕೆ ನಡಿಯತಕ್ಕದ್ದಾಗಿದ್ದರೂ ಹಾಗೆ ನಡಿಯುವದು ನಿಶ್ಚಯವಾಗಿದ್ದರೆ ಅಥವಾ ಅತಿವೇಗದಿಂದ ಆಗುವದೆಂದಿದ್ದರೆ ಅದಕ್ಕೆ ಭೂತ ರೂಪವು ಉಪಯೋಗಿಸಲ್ಪಡುವದು. ಉದಾ: ಅವನು ಆ ಮರದಿಂದ ಬಿದ್ದರೆ ಸತ್ತನು. ನಾನು ಈ ಪಾಠವನ್ನು ಕಲಿತರೆ ನನ್ನ ಕೆಲಸ ಆಯ್ತು. ಇದಲ್ಲದೆ ಭೂತ ಕ್ರಿಯಾಪದರೂಪಗಳಾಗಿ ಉಪಯೋಗಿಸಲ್ಪಡುವ ಸಮಾಪ್ತ ಭೂತ, ಅತೀತ-ಭೂತ ಮತ್ತು ಅಪರೋಕ್ಷ-ಭೂತಗಳೆಂಬ ರೂಪಗಳನ್ನು ಹಿಂದೆ 83ನೇ ಅಂಕೆಯಲ್ಲಿ ವಿವರಿಸಿರುತ್ತೇದೆ. ಆ ರೂಪಗಳು ಸಾಧಾರಣಭೂತ ಕ್ರಿಯೆಗೆ ಮಿಕ್ಕದ ಕಾಲವನ್ನು ಸೂಚಿಸುತ್ತವೆ.

3. ಭವಿಷ್ಯತ್ ಭಾವಿ ಕ್ರಿಯಾಪದಗಳ ಪ್ರಯೋಗ—ಹಿಂದೆ 83ನೇ ಅಂಕೆಯಲ್ಲಿ ವಿವರಿಸಿರುವ ಪ್ರಕಾರ ಭವಿಷ್ಯತ್ ಕ್ರಿಯಾಪದಗಳು ಭವಿಷದ್ಧರ್ಥ ಮಾತ್ರವಲ್ಲದೆ ಸಂಶಯಾರ್ಥ ಕೂಡ ಹೇಳುವವು. ಉದಾ: ನನಗೆ ಸಮಯ ಸಿಕ್ಕಿದರೆ ಆ ಕೆಲಸವನ್ನು ಮಾಡೇನು. ಭವಿಷ್ಯತ್ ಕ್ರಿಯಾಪದಗಳ ಪ್ರಯೋಗವು ಕನ್ನಡ ಮಾತಿನಲ್ಲಿ ಹೆಚ್ಚಾಗಿ ರೂಢಿ ಇರುವದು. ಭಾವಿ ಕ್ರಿಯಾಪದಗಳ ಪ್ರಯೋಗವು ಕಾವ್ಯಗಳಲ್ಲಿ ಹೆಚ್ಚಾಗಿರುವದು. ಇವಲ್ಲದೆ ಒಬ್ಬನು ಒಂದು ಕ್ರಿಯೆಯನ್ನು ಸ್ವಾಭಾವಿಕವಾಗಿ ಮಾಡುತ್ತಾನಾದರೆ ಅಂಥ ಪಕ್ಷದಲ್ಲಿ ಮೂರು ಕಾಲದಲ್ಲಿಯೂ ನಡಿಯುವ ಕ್ರಿಯೆಗೆ ಭಾವಿಯು ಪ್ರಯೋಗಿಸಲ್ಪಡುವದು. ಇದಕ್ಕೆ ತದ್ಧರ್ಮಾರ್ಥವೆಂಬ ಹೆಸರು. ಉದಾ: ಹುಲಿಗಳು ಚಿಕ್ಕ

ಮೃಗಗಳನ್ನು ಕೊಂದು ತಿನ್ನುವವು; ಅಂದರೆ—ಅವುಗಳು ಅಂಥವುಗಳನ್ನು ಮೊದಲು ತಿಂದಿದ್ದವು; ಈಗ ತಿನ್ನುತ್ತವೆ; ಇನ್ನು ಮುಂದೆಯೂ ತಿಂದಾವು ಎಂಬ ಅರ್ಥ.

4. ನಿಷೇಧ ಕ್ರಿಯಾಪದಗಳ ಪ್ರಯೋಗ—ಮೂರು ಕಾಲಗಳಲ್ಲಿಯೂ ನಡಿಯದ ಕ್ರಿಯೆಯನ್ನು ಹೇಳುವದಕ್ಕೆ ನಿಷೇಧ ರೂಪಗಳು ಉಪಯೋಗಿಸಲ್ಪಡುತ್ತವೆ. ಉದಾ: ಸೋಮಾರಿ ಹುಡುಗರು ತಮ್ಮ ಪಾಠವನ್ನು ಕಲಿಯರು. ವಿಲಾಯತಿಯವರು ಪೂರ್ವದಲ್ಲಿ ವಿದ್ಯೆಯನ್ನು ಈಗಿನಷ್ಟು ತಿಳಿಯರು.

5. ವಿಧಿ ಕ್ರಿಯಾಪದಗಳ ಪ್ರಯೋಗ—ಆಜ್ಞಾಪನೆ, ವಿಜ್ಞಾಪನೆ, ಅನುಮತಿ ಮುಂತಾದ ಕ್ರಿಯೆಗಳನ್ನು ಹೇಳುವದಕ್ಕೆ ವಿಧಿ ರೂಪಗಳು ಉಪಯೋಗಿಸಲ್ಪಡುವವು. ಉತ್ತಮ-ಪುರುಷ ವಿಧಿ ರೂಪಗಳು ಮನಸ್ಸಿನ ಸಂಕಲ್ಪವನ್ನೂ, ಮಧ್ಯಮ-ಪುರುಷ ವಿಧಿ ರೂಪಗಳು ಆಜ್ಞಾಪನೆ ಅಥವಾ ವಿಜ್ಞಾಪನೆಯನ್ನೂ, ಪ್ರಥಮ-ಪುರುಷ ವಿಧಿ ರೂಪಗಳು ಅನುಮತಿ ಅಥವಾ ಆಶೆಯನ್ನು ಹೇಳುವವು. ಉದಾ:

ಉತ್ತಮ-ಪುರುಷಕ್ಕೆ—ಪಾಠವನ್ನು ಕಲಿಯುವಾ. ಮಧ್ಯಮ-ಪುರುಷಕ್ಕೆ—ಇಲ್ಲಿ ನೋಡು. ಕೃಪೆಯಿಂದ ನಡಿಸಿರಿ. ದಯೆಯಿಂದ ಈ ಪತ್ರವನ್ನು ನೋಡುವದು. ಪ್ರಥಮ-ಪುರುಷಕ್ಕೆ—ಅವನು ಹೋಗಲಿ. ಇವನು ಕಲಿಯಲಿ.

## ಸಂಯುಕ್ತಕ್ರಿಯಾಪದಗಳ ಪ್ರಯೋಗ.

137. ಸಂಯುಕ್ತ-ಕ್ರಿಯಾಪದಗಳು ಧಾತುಗಳ ನ್ಯೂನ-ರೂಪಗಳ ಮೇಲೆ ಇರು ಧಾತುವಿನ ರೂಪಗಳನ್ನು ಕೂಡಿಸುವದರಿಂದ ಆಗುತ್ತವೆಂಬದನ್ನೂ, ಭೂತ-ನ್ಯೂನಗಳ ಮೇಲೆ ಇರು ಧಾತುವಿನ ಬೇರೆ ಬೇರೆ ರೂಪಗಳನ್ನು ಕೂಡಿಸುವದರಿಂದ ಕೆಲವು ಭೂತರೂಪಗಳು ಆಗುತ್ತವೆಂಬದನ್ನು ಕೂಡ ಹಿಂದೆ 83ನೇ ಅಂಕೆಯಲ್ಲಿ ಹೇಳೋಣಾಗಿಯದೆ. ವರ್ತಮಾನ-ನ್ಯೂನ-ರೂಪಗಳ ಮೇಲೆ ಇರು ಧಾತುವಿನ ರೂಪಗಳನ್ನು ಕೂಡಿಸುವದರಿಂದ ಆಗುವ ಸಂಯುಕ್ತ ಕ್ರಿಯಾಪದಗಳು ಕ್ರಿಯೆಯು ತಕ್ಕಷ್ಟು ಕಾಲ ಇರು

ವಿಕೆಯನ್ನು ಹೇಳುವವು. ಉದಾ: ಮನೆಯಲ್ಲಿ ಕಲಿಯುತ್ತಿರುತ್ತೇನೆ. ಪೂರ್ವದ ಅರಸುಗಳು ಜನರನ್ನು ಕಠಿಣವಾಗಿ ಶಿಕ್ಷಿಸುತ್ತಿದ್ದರು.

ಪಕ್ಷಾರ್ಥವನ್ನು ಹೇಳುವದಕ್ಕೂ ಅಂಥ ಸಂಯುಕ್ತರೂಪಗಳು ಉಪಯೋಗಿಸಲ್ಪಡುತ್ತವೆ. ಉದಾ: ನಿನ್ನೆ ಮಳೆ ಇಲ್ಲದಿರುತ್ತಿದ್ದರೆ ನಾನು ಬರುತ್ತಿದ್ದೆನು. ನೀನು ಮನಸ್ಸು ಕೊಡುತ್ತಿದ್ದರೆ ತಿಳಿಯುತ್ತಿತ್ತು.

## ಸಾನುಬಂಧಕ್ರಿಯಾಪದಗಳ ಪ್ರಯೋಗ.

138. ಊನಕ್ರಿಯಾಪದಗಳು ಮತ್ತು ಬೇರೆ ಕೆಲವು ಕ್ರಿಯಾಪದಗಳ ಧಾತುಗಳು ಸಹಾಯಕ್ರಿಯಾಪದಗಳಾಗಿ ಧಾತುಗಳ ಭಾವರೂಪಗಳ ಮೇಲೆ ಸೇರಿ ಅನುಬಂಧಕ್ರಿಯಾಪದಗಳೆನ್ನಿಸಿಕೊಳ್ಳುತ್ತವೆಂತಲು, ಅವುಗಳ ಜೋಡಣೆಯಿಂದ ಉಂಟಾದ ಕ್ರಿಯಾಪದಗಳು ಸಾನುಬಂಧಕ್ರಿಯಾಪದಗಳೆನ್ನಿಸಿಕೊಳ್ಳುತ್ತವೆಂತ ಕೂಡ ಹಿಂದೆ 85ನೇ ಅಂಕೆಯಲ್ಲಿ ಹೇಳಿರುತ್ತದೆ. ಅಂಥ ಅನುಬಂಧಕ್ರಿಯಾಪದಗಳು ಹೇಳುವ ಅರ್ಥವಿಶೇಷಗಳು ಯಾವವೆಂದರೆ:—

"ಒಲ್ಲೆನು" "ಅಮ್ಮೆನು" ಇವುಗಳು ಭಾವರೂಪದ ಮೇಲೆ ಸೇರಿ ಆ ಭಾವರೂಪ ಹೇಳುವಂಥ ಕ್ರಿಯೆಯನ್ನು ನಡಿಸ ಮನಸ್ಸಿಲ್ಲ ಅಥವಾ ಪ್ರೀತಿ ಇಲ್ಲವೆಂಬ ಅರ್ಥವನ್ನು ಹೇಳುವವು. ಉದಾ: ನಾನು ನಿನಗೆ ಅಷ್ಟು ಹಣ ಕೊಡಲೊಲ್ಲೆನು. ನಾನು ಅಲ್ಲಿಂದ ಮಧು ತರಲಮ್ಮೆನಮ್ಮಾ!

"ಆಪೆನು" "ಬಲ್ಲೆನು" ಮತ್ತು ಇವುಗಳ ನಿಷೇಧರೂಪಗಳಾದ "ಆರೆನು" "ಅರಿಯೆನು" ಎಂಬವುಗಳು ಭಾವರೂಪದ ಮೇಲೆ ಸೇರಿದ್ದಲ್ಲಿ, ಶಕ್ತ್ಯರ್ಥವನ್ನು ಹೇಳುವವು. ಉದಾ: ಅವನು ಮರಕ್ಕೆ ಏರಲಾಪನು. ನಾನು ಸುಳ್ಳು ಹೇಳಲಾರೆನು. ನೀನು ಪದ್ಯ ಕಟ್ಟಬಲ್ಲೆ. ನಾನು ಅರಿಯೆನು.

"ಬಹುದು" "ಆಗುವದು" ಮತ್ತು ಇವುಗಳ ನಿಷೇಧರೂಪಗಳಾದ "ಕೂಡದು" "ಆಗದು" ಎಂಬವುಗಳು ಭಾವರೂಪದ ಮೇಲೆ ಸೇರಿ, ಆ ಭಾವರೂಪ ಹೇಳುವ ಕ್ರಿಯೆಯನ್ನು ನಡಿಸುವಲ್ಲಿ ಇರುವ ನಿರಾಕ್ಷೇಪ ಆಕ್ಷೇಪಗಳನ್ನು ಸೂಚಿಸುವವು. ಉದಾ: ನೀನು ಒಳಗೆ ಹೋಗ ಬಹುದು; ಶೂದ್ರನು

ಹೋಗ ಕೂಡದು; ಮಕ್ಕಳು ಆ ವಿಗ್ರಹವನ್ನು ಮುಟ್ಟಲಾಗುವದು; ದೊಡ್ಡವರು ಮುಟ್ಟಲಾಗದು.

"ಇಲ್ಲ" ಎಂಬದು ಭಾವರೂಪಗಳ ಮೇಲೆ ಮಾತ್ರವಲ್ಲ, ಕ್ರಿಯಾನಾಮಗಳ ಮೇಲೂ ಸೇರುವದು. ಉದಾ: ಅವನು ಬರಲಿಲ್ಲ, ನಾನು ಹೋಗುವದಿಲ್ಲ.

"ಬೇಕು" ಮತ್ತು ಇದರ ನಿಷೇಧರೂಪವಾದ "ಬೇಡ" ಇವುಗಳು ವಿಧ್ಯರ್ಥವನ್ನು ಹೇಳುವವು; ಆದರೆ ಉದ್ದಿಶ್ಯಾರ್ಥ ಕೂಡ ಅದರೊಂದಿಗೆ ಕೂಡಿರುವದು. ಉದಾ: ಹೋಗಬೇಕು;—ಹೋಗುವದು ಅವಶ್ಯ. ಬರಬೇಡ;—ಬರುವದು ಅವಶ್ಯವಿಲ್ಲ.

"ಮಾಡು" ಎಂಬದು ಭಾವರೂಪದ ಮೇಲೆ ಸೇರಿದರೆ ಪ್ರೇರಣಾರ್ಥವನ್ನೂ, "ಕೊಡು" ಎಂಬದು ಸೇರಿದಲ್ಲಿ ಅನುಮತ್ಯರ್ಥವನ್ನೂ, ಹೇಳುವದು. ಉದಾ: ಅವನನ್ನು ಬರಮಾಡಿದನು. ನನ್ನನ್ನು ಹೋಗಗೊಡು.

"ಪಡು" ಎಂಬದು ಕರ್ಮಣಿಪ್ರಯೋಗದಲ್ಲಿ ಭಾವರೂಪದ ಮೇಲೆ ಸಹಾಯ ಕ್ರಿಯಾಪದವಾಗಿ ಸೇರುವದು. ಇದನ್ನು ಹಿಂದೆ 134 ನೇ ಅಂಕೆಯಲ್ಲಿ ನೋಡಿ ತಿಳಕೊಳ್ಳತಕ್ಕದ್ದು. ಉದಾ: ಟಾಟರಿದೇಶದಲ್ಲಿ ಕಾಡುಕುದುರೆಗಳು ಹೆಚ್ಚಾಗಿ ಹಿಡಿಯಲ್ಪಟ್ಟು, ಸಾಕಲ್ಪಡುತ್ತವೆ.

## ಉಪಕ್ರಿಯಾಸಂಯುಕ್ತಕ್ರಿಯಾಪದಗಳ ಪ್ರಯೋಗ.

139. ಉಪಕ್ರಿಯಾಸಂಯುಕ್ತ ಕ್ರಿಯಾಪದಗಳಂದರೆ—ಕೊಳ್ಳು, ಕೊಡು, ಹಾಕು, ಹೋಗು, ಬಿಡು, ಆಡು, ಇಡು, ಬರು ಎಂಬ ಉಪಕ್ರಿಯಾಪದಗಳು ಧಾತುಗಳ ಭೂತನ್ಯೂನದ ಮೇಲೆ ಸೇರುವದರಿಂದ ಉಂಟಾಗುವ ಕ್ರಿಯಾಪದಗಳಾಗಿರುತ್ತವೆ. ಅನುಬಂಧ ಕ್ರಿಯಾಪದಗಳು ಧಾತುಗಳ ಭಾವರೂಪಗಳ ಮೇಲೆ ಸೇರಿ, ನಾನಾ ಅರ್ಥವಿಶೇಷಗಳನ್ನು ಹೇಳುವ ಪ್ರಕಾರವೇ ಉಪಕ್ರಿಯಾಪದಗಳು ಧಾತುಗಳ ಭೂತನ್ಯೂನರೂಪಗಳ ಮೇಲೆ ಸೇರಿ ಬೇರೆ ಬೇರೆ ಅರ್ಥಗಳನ್ನು ಹೇಳುತ್ತವೆ ಹ್ಯಾಗಂದರೆ:—

"ಕೊಳ್ಳು" ಎಂಬದು ಯಾರಾದರೂ ನ್ಯೂನಕ್ರಿಯೆಯನ್ನು ತನ್ನ ಸ್ವಂತಕ್ಕೋಸ್ಕರವೇ ನಡಿಸುತ್ತಾನೆಂಬ ಅರ್ಥವನ್ನು ಕೊಡುವದು. ಉದಾ: ಅವನು ಪಾಠವನ್ನು ಬರೆದುಕೊಂಡನು. ನಾನು ಓದಿಕೊಂಡೆನು.

"ಕೊಡು" ಎಂಬದು ನ್ಯೂನಕ್ರಿಯೆಯು ಬೇರೆಯವರಿಗೋಸ್ಕರ ನಡಿಸಲಾಯಿತೆಂಬ ಅರ್ಥವನ್ನು ಕೊಡುವದು. ಉದಾ: ಅಕ್ಕಸಾಲಿಯು ಆ ಹುಡುಗಿಗೆ ನಗವನ್ನು ಮಾಡಿಕೊಟ್ಟನು. ಅವಿೂನನು ವಾದಿಗೆ ಭೂಮಿ ಬಿಡಿಸಿಕೊಟ್ಟನು.

"ಹಾಕು, ಹೋಗು, ಬಿಡು" ಇವುಗಳು ನ್ಯೂನಕ್ರಿಯೆಯು ಸಂಪೂರ್ಣವಾಯಿತೆಂಬ ಅರ್ಥ ಕೊಡುತ್ತವೆ. ಉದಾ: ಜಡ್ಜರು ಆ ವ್ಯಾಜ್ಯವನ್ನು ತೆಳ್ಳಿಹಾಕಿದರು. ಅವರು ಮನೆ ಬಿಟ್ಟುಹೋದರು. ಅವನು ಕುದುರೆಯನ್ನು ಕೊಟ್ಟುಬಿಟ್ಟನು.

"ಆಡು" ಎಂಬದು ನ್ಯೂನಕ್ರಿಯೆಯು ಎರಡೂ ಕಡೆಗೆ ನಡಿಯುತ್ತದೆಂಬ ಅರ್ಥವನ್ನು ಹೇಳುವದು. ಉದಾ: ಹುಡುಗರು ಓಡ್ಯಾಡುತ್ತಾರೆ. ಮಕ್ಕಳು ಹೊಡೆದಾಡುತ್ತಾರೆ.

"ಇಡು" ಎಂಬದು ನ್ಯೂನರೂಪ ಹೇಳುವ ಸಕರ್ಮಕ ಕ್ರಿಯೆಯನ್ನು ತೀರಿಸಿ, ಅದಕ್ಕೆ ವಿಷಯವಾದ್ದನ್ನು ಭದ್ರಪಡಿಸೋಣಾಯಿತೆಂಬ ಅರ್ಥವನ್ನು ಕೊಡುವದು. ಉದಾ: ಹಣವನ್ನು ಕಟ್ಟಿಟ್ಟನು. ಲೋಭಿಯು ತನ್ನ ಬದುಕನ್ನು ಹುಗಿದಿಟ್ಟನು.

"ಬರು" ಎಂಬದು ನ್ಯೂನರೂಪ ಹೇಳುವ ಕ್ರಿಯೆಯು ಹೆಚ್ಚು ದಿವಸಗಳಿಂದ ನಡೆದುಬಂದದೆ ಎಂಬ ಅರ್ಥವನ್ನು ಕೊಡುವದು. ಉದಾ: ಆ ಮನೆಯನ್ನು ಅನುಭವಿಸಿಬಂದನು. ನಮ್ಮ ಜಾತಿಯಲ್ಲಿ ನಡೆದುಬಂದಕಟ್ಟಳೆ. ತಂದೆಯು ನಡಿಸಿಬಂದಂತೆ ಮಗನು ನಡಿಸಿದನು.

## ಅವ್ಯಯಾತ್ಮಕಕ್ರಿಯಾಪದಗಳ ಪ್ರಯೋಗ.

140. ಭಾವ ಮತ್ತು ನ್ಯೂನರೂಪಗಳೆಂಬ ಅಪೂರ್ಣಕ್ರಿಯಾಪದರೂಪಗಳು ಅವ್ಯಾತ್ಮಕಕ್ರಿಯಾಪದಗಳ ಪೂರ್ವದಲ್ಲಿ ಸೇರಿ, ಅವುಗಳ ಅರ್ಥವನ್ನು ಪೂರ್ಣ ಮಾಡುತ್ತವೆ. ಅವುಗಳು ಹೇಳುವ ಬೇರೆ ಬೇರೆ ಅರ್ಥವಿಶೇಷಗಳು ಯಾವವೆಂದರೆ:—

## I. ಭಾವರೂಪಗಳ ಪ್ರಯೋಗ.

1. ಭಾವರೂಪಗಳು ಭಾವಿ ಪ್ರಯೋಗದಲ್ಲಿ ಕೆಲವು ನಪುಂಸಕೈಕವಚನಗಳಾದ ಅನುಬಂಧಕ್ರಿಯಾಪದಗಳ ಪೂರ್ವದಲ್ಲಿ ಸೇರಿ ಪ್ರಥಮ ವಿಭಕ್ತಿಯ ಅರ್ಥವನ್ನು ಕೊಡುತ್ತವೆ. ಉದಾ:—ನೀನು ಆ ಕೆಲಸವನ್ನು ಮಾಡಲು ಆಗದು. ಅವನು ಬರಬಾರದು ಇತ್ಯಾದಿ.

2. ಆಖ್ಯಾತ ಊನಕ್ರಿಯಾಪದಗಳಾದ ಅನುಬಂಧಕ್ರಿಯಾಪದಗಳ ಪೂರ್ವದಲ್ಲಿ ಸೇರಿ ಕರ್ಮಾರ್ಥ ಹೇಳುವ ದ್ವಿತೀಯ ವಿಭಕ್ತಿಯ ಅರ್ಥವನ್ನು ಕೊಡುತ್ತವೆ. ಉದಾ: ನಾನು ಓದ ಬಲ್ಲೆನು, ಆದರೆ ಬರೆಯಲರಿಯೆನು. ಪಕ್ಷಿಗಳನ್ನು ಸಾಕಲಾಪೆನು ಆದರೆ ಕೊಲ್ಲಲರಿಯೆನು ಇತ್ಯಾದಿ.

3. ಕೆಲವು ಕಡೆಯಲ್ಲಿ ನಿಮಿತ್ತಾರ್ಥವನ್ನು ಹೇಳುವ ಚತುರ್ಥಿವಿಭಕ್ತಿಯ ಅರ್ಥವನ್ನು ಕೊಡುತ್ತವೆ. ಉದಾ: ನಾನು ಆಡಲಿಕ್ಕೆ ಹೋಗುತ್ತೇನೆ. ಅವನು ಆಟ ನೋಡಲಿಕ್ಕೆ ನಿಂತ್ತನು. ಅವಳು ಕಲಿಯ ಬಂದಿದ್ದಾಳೆ ಇತ್ಯಾದಿ.

4. ಕೆಲವು ಕಡೆಯಲ್ಲಿ ಕಾಲಾರ್ಥವನ್ನು ಹೇಳುವ ಸಪ್ತಮಿವಿಭಕ್ತಿಯ ಅರ್ಥವನ್ನು ಕೊಡುತ್ತವೆ. ಉದಾ: ನಾನು ಬರಲು ಹುಡುಗರು ಓಡಿದರು. ಸೂರ್ಯನು ಮೂಡಲು ನಕ್ಷತ್ರಗಳು ಅಡಗುತ್ತವೆ. ಚಂದ್ರನು ಉದಯಿಸಲು ಕುಮುದಗಳು ಅರಳಿದವು ಇತ್ಯಾದಿ. ಈ ಮೇರಿಗೆ ಕಾಲಾರ್ಥ ಕೊಡುವ ಭಾವರೂಪಗಳಿಗೆ ಸತಿಸಪ್ತಮಿ ಅನ್ನುವರು. ಸತಿಸಪ್ತಮಿಯಲ್ಲಿ 2.ನೇ ಭಾವರೂಪವೇ ಹೆಚ್ಚಾಗಿ ಉಪಯೋಗಿಸಲ್ಪಡುವದು; ಕೆಲವು ಸಾರಿ ಆ ಭಾವರೂಪಕ್ಕೆ ಆಗಿ ಎಂಬದನ್ನು ಸೇರಿಸುವರು. ಉದಾ: ಕೋಳಿ ಕೂಗಲಾಗಿ ಬೆಳಗಾಯಿತು.

## II. ನ್ಯೂನರೂಪಗಳ ಪ್ರಯೋಗ.

1. ನ್ಯೂನರೂಪಗಳು ಕಾಲಾರ್ಥ, ಸಮುಚ್ಚಯಾರ್ಥ, ರೀತ್ಯರ್ಥ ಮತ್ತು ಕಾರಣಾರ್ಥಗಳನ್ನು ಹೇಳುವವು. ಉದಾ: ಕಾಲಾರ್ಥಕ್ಕೆ—ಶಖೆ ಕಾಲ ಬರುತ್ತಾ ಛಳಿ ಕಾಲ ಅಡಗಿತು. ಸಮುಚ್ಚಯಾರ್ಥಕ್ಕೆ—ಅವನು

ಶಾಲೆಗೆ ಬಂದು, ಓದಿ, ಕಲಿತು, ಆಡದೆ ಕೂತನು. ರೀತ್ಯರ್ಥಕ್ಕೆ—ಓಡುತ್ತಾ ಹೋದನು. ತಿನ್ನುತ್ತಾ ನಡೆಯುತ್ತಾನೆ. ಕಾರಣಾರ್ಥಕ್ಕೆ—ಕಲಿಯದೆ ಕೆಟ್ಟನು. ಜ್ವರ ಬಂದು ಬರಹ ಮರತನು.

## ಕೃದ್ವಾಚಿಗಳ ಪ್ರಯೋಗ.

141. ಕೃದ್ವಾಚಿಗಳು ನಾನಾ ವಿಧವಾಗಿ ಪ್ರಯೋಗಿಸಲ್ಪಡುವವು. ಹ್ಯಾಗಂದರೆ:—

1. ನಾಮಪದಗಳ ಪೂರ್ವದಲ್ಲಿ ಸೇರಿ ಅವುಗಳನ್ನು ವಿಶೇಷಿಸುವವು. ಉದಾ: ಹೋದವರುಷ. ಹಾರುವ ಪಕ್ಷಿ. ಕಚ್ಚುವನಾಯಿ. ಆಡದ ಹುಡುಗಿ ಇತ್ಯಾದಿ.

2. ಪ್ರಥಮಪುರುಷಾರ್ಥಕ ಸರ್ವನಾಮಗಳ ಪೂರ್ವದಲ್ಲಿ ಸೇರಿ ಕೃದ್ನಾಮಗಳನ್ನು ಹುಟ್ಟಿಸುವವು. ಉದಾ: ಬಂದವನು. ನೋಡಿದವಳು. ಬರೆಯುವವರು. ಬೇಡುವವನು ಇತ್ಯಾದಿ.

3. ಕೆಲವು ಕೃದ್ವಾಚಿಗಳು ನಾಮಪದಗಳ ಮತ್ತು ವಿಶೇಷಣಗಳ ಮೇಲೆ ಸೇರಿ ಕೃದ್ವಾಚಿಪ್ರಯುಕ್ತ ವಿಶೇಷಣಗಳನ್ನು ಹುಟ್ಟಿಸುವವು. ಉದಾ: ಕಲ್ಲಾದ ಎದೆ. ಚಂದವಾದ ತೋಟ ಇತ್ಯಾದಿ. (99ನೇ ಅಂಕೆಯಲ್ಲಿ ನೋಡು).

4. ಸ್ಥಾನಾರ್ಥಕ, ಕಾಲಾರ್ಥಕ, ರೀತ್ಯರ್ಥಕ ಮತ್ತು ಕಾರಣಾರ್ಥಕ ಉಪಸರ್ಗಗಳ ಪೂರ್ವದಲ್ಲಿ ಸೇರಿ, ಬೇರೆ ಬೇರೆ ಕ್ರಿಯೆಗಳನ್ನು ವಿಶೇಷಿಸುವವು. ಉದಾ. ಸ್ಥಾನಾರ್ಥಕಕ್ಕೆ—ಕಳ್ಳರು ಇದ್ದಲ್ಲಿ ವಾಸಿಸ ಬಾರದು. ಕಾಲಾರ್ಥಕಕ್ಕೆ—ಮಳೆ ಬರುವಾಗ್ಯೆ ಬೆಳೆ ಬೆಳಸ ಬೇಕು. ರೀತ್ಯರ್ಥಕಕ್ಕೆ—ಬೋಧಕನು ಓದಿದಂತೆ ವಿದ್ಯಾರ್ಥಿಯು ಓದಿದನು. ಕಾರಣಾರ್ಥಕಕ್ಕೆ—ಅವನು ಕದ್ದ ಕಾರಣ ಶಿಕ್ಷಿಸಲ್ಪಟ್ಟನು ಇತ್ಯಾದಿ.

5. ಪಕ್ಷಾರ್ಥಕನಿಪಾತವಾದ "ರೆ" ಮತ್ತು ಇದಕ್ಕೆ "ಊ" ನಿಪಾತ ಸೇರಿ ಉಂಟಾದ ಪಕ್ಷಾರ್ಥಕ ಅವ್ಯಯವಾದ "ರೂ" ಇವುಗಳ ಪೂರ್ವದಲ್ಲಿ ಸೇರಿ ಕ್ರಿಯೆಗಳನ್ನು ಪಕ್ಷಾರ್ಥವಾಗಿ ವಿಶೇಷಿಸುವವು. ಉದಾ: [illegible] ಬಂದರೆ ಕಾಸು ಕೊಟ್ಟೇನು. ನೀನು ಕರದರೂ ಅವನು ಬಾರನು ಇತ್ಯಾದಿ.

6. ಇದಲ್ಲದೆ ವಿಶೇಷಣಗಳಾಗಿ ಉಪಯೋಗಿಸಲ್ಪಟ್ಟ ಕೃದ್ವಾಚಕಗಳು ತಾವು ವಿಶೇಷಿಸುವ ನಾಮಪದಗಳಿಗೆ ಸಂಬೋಧನವನ್ನುಳಿದ ಎಲ್ಲಾ ವಿಭಕ್ತಿಗಳ ಅರ್ಥವನ್ನು ಕೊಡುವವು. ಉದಾ: ಪ್ರಥಮೆಗೆ—ಹಣ ಕೊಟ್ಟ ಮನುಷ್ಯನು=(ಯಾವನು ಹಣ ಕೊಟ್ಟನೋ ಆ ಮನುಷ್ಯನು.) ದ್ವಿತೀಯೆಗೆ—ತಂದೆ ಕೊಟ್ಟ ವಸ್ತ್ರ=(ಯಾವ ವಸ್ತ್ರವನ್ನು ತಂದೆ ಕೊಟ್ಟನೋ ಅದು.) ತೃತೀಯೆಗೆ—ಮರ ಕಡೆದ ಕೊಡಲಿ=(ಯಾವ ಕೊಡಲಿಯಿಂದ ಮರ ಕಡಿಯೋಣಾಯ್ತೋ ಅದು.) ಚತುರ್ಥಿಗೆ—ನಾವು ಮನೆ ಕೊಟ್ಟ ಮನುಷ್ಯನು=(ಯಾವ ಮನುಷ್ಯನಿಗೆ ಮನೆ ಕೊಟ್ಟನೋ ಅವನು.) ಪಂಚಮಿಗೆ—ಕಳ್ಳರು ಶಿಕ್ಷೆಪಟ್ಟ ನ್ಯಾಯಾಧಿಪತಿ=(ಯಾರ ದೆಸೆಯಿಂದ ಕಳ್ಳರು ಶಿಕ್ಷೆ ಪಟ್ಟರೋ ಆ ನ್ಯಾಯಾಧಿಪತಿ.) ಷಷ್ಠಿಗೆ—ಗೆಲ್ಲು ಬಿದ್ದ ಮರ=(ಯಾವದರ ಗೆಲ್ಲು ಬಿದ್ದದೋ ಆ ಮರ.) ಸಪ್ತಮಿಗೆ—ನಾವು ಕೂತ ಚಾಪೆ=(ಯಾವ ಚಾಪೆಯಲ್ಲಿ ನಾವು ಕೂತೆವೋ ಅದು.)

## ಕೃದ್ನಾಮ ಮತ್ತು ಕ್ರಿಯಾನಾಮಗಳ ಪ್ರಯೋಗ.

142. ಕೃದ್ನಾಮ ಮತ್ತು ಕ್ರಿಯಾನಾಮಗಳು ನಾಮಪದಗಳಂತೆಯೇ ಎಲ್ಲಾ ವಿಭಕ್ತಿಗಳನ್ನು ಹೊಂದಿ, ಆಯಾ ವಿಭಕ್ತಿಗಳು ಹೇಳುವಂಥ ಕಾರಕಾರ್ಥಗಳನ್ನು ಹೇಳುವವು. ಉದಾ:

| | ಕೃದ್ನಾಮ. | ಕ್ರಿಯಾನಾಮ. |
|---|---|---|
| ಪ್ರ. | ನಕ್ಕವನು ಕಳ್ಳನು. | ಅವನು ಓಡಿದ್ದು ಸಮ. |
| ದ್ವಿ. | ಕದ್ದವಳನ್ನು ಹಿಡಿದರಂತೆ. | ನೋಡಿದ್ದನ್ನು ಹೇಳಿದನು. |
| ತೃ. | ಬೇಡುವವರಿಂದ ಏನಾಗುವದು? | ಆಡುವದರಿಂದ ಪ್ರಯೋಜನವೇನು? |
| ಚ. | ನೋಡುವವರಿಗೆ ತೋರಿತು. | ಬಂದದ್ದಕ್ಕೆ ಇದೇ ಲಾಭ. |
| ಸ. | ಬಂದವರಲ್ಲಿ ಜಾಣನ್ಯಾರು? | ನಾನು ಮಾಡಿದ್ದರಲ್ಲಿ ಇದೇ ಉತ್ತಮ. |

## ಅವ್ಯಯಶಬ್ದಗಳ ಪ್ರಯೋಗ.

143. ಅವ್ಯಯಶಬ್ದಗಳಾದ ಕ್ರಿಯಾವಿಶೇಷಣಾವ್ಯಯ, ಉಪಸರ್ಗಾವ್ಯಯ, ಸಮುಚ್ಚಾಯಕಾವ್ಯಯ, ಅನುಕರಣಾವ್ಯಯ, ಭಾವಬೋಧಕಾ

ವ್ಯಯ, ಇವುಗಳು ಬೇರೆ ಬೇರೆ ಅರ್ಥದಲ್ಲಿ ಉಪಯೋಗಿಸಲ್ಪಡುತ್ತವೆ ಹ್ಯಾಗೆಂದರೆ:—

1. ಕ್ರಿಯಾವಿಶೇಷಣಾವ್ಯಯಗಳು ಕ್ರಿಯೆಯು ನಡೆಯುವ ಸ್ಥಾನ, ಕಾಲ, ರೀತಿಯನ್ನು ವಿಶೇಷಿಸುವದಕ್ಕೆ ಉಪಯೋಗಿಸಲ್ಪಡುತ್ತವೆ. ಉದಾ:

ಸ್ಥಾನಕ್ಕೆ—ಅವನು ಕೆಳಗೆ ಕೂತಿದ್ದಾನೆ; ನಾನು ಒಳಗೆ ಹೋಗುತ್ತೇನೆ.

ಕಾಲಕ್ಕೆ—ಹುಡುಗನು ನಿನ್ನೆ ಬಂದನು; ಸೂರ್ಯನು ಬೆಳಗ್ಗೆ ಮೂಡುತ್ತಾನೆ.

ರೀತಿಗೆ—ಕುದುರೆಯು ತ್ವರೆಯಿಂದ ಓಡುತ್ತದೆ; ಮುದುಕನು ಮೆಲ್ಲಗೆ ನಡೆಯುತ್ತಾನೆ.

2. ಉಪಸರ್ಗಾವ್ಯಯಗಳು ಮುಖ್ಯವಾಗಿ ಯಾವಯಾವದರ ಮೇಲೆ ಬರುತ್ತವೆಂಬದನ್ನು 112ನೇ ಅಂಕೆಯಲ್ಲಿ ವಿವರಿಸಿರುತ್ತದೆ. ಇವುಗಳಲ್ಲಿ ನಾಮಪದಗಳ ಮೇಲೆ ಬರುವಂಥವು—ಕೆಲವು ತೃತೀಯೆ, ಕೆಲವು ಚತುರ್ಥಿ ಮತ್ತು ಕೆಲವು ಸಪ್ತಮಿ ವಿಭಕ್ತಿಯ ಅರ್ಥದಲ್ಲಿ ಬಂದು, ಕ್ರಿಯೆಯನ್ನು ವಿಶೇಷಿಸುತ್ತವೆ. ಉದಾ:

ತೃತೀಯಾರ್ಥಕ್ಕೆ—ಸೇವಕರಮುಖಾಂತರ ಕೆಲಸ ನಡಿಯುತ್ತದೆ; ತೆಂಕಕಡೆಯಿಂದ ಮಳೆ ಹೊಡೆಯುತ್ತದೆ; ಗುರುವಿನಂತೆ ಶಿಷ್ಯನು.

ಚತುರ್ಥ್ಯರ್ಥಕ್ಕೆ—ಕುಟುಂಬಕ್ಕೋಸ್ಕರ ಕಷ್ಟ ಪಡುತ್ತಾನೆ; ಹಣದ ವಿಷಯ ಹೋರಾಡುತ್ತಾರೆ; ನದಿಯಬಳಿಗೆ ಹೋದನು; ಧೊರೆಪರ್ಯಂತರ ದೂರು.

ಸಪ್ತಮ್ಯರ್ಥಕ್ಕೆ—ಮನೆಯಹಿಂದೆ ತೋಟ ಮಾಡುತ್ತಾರೆ; ನಾಲ್ವತ್ತು ವರುಷಗಳ ಮೊದಲು ಹುಟ್ಟಿದೆನು; ಜ್ಞಾನಿಯೊಡನೆ ಕೂಡಬೇಕು.

ಇದಲ್ಲದೆ ಕೃದ್ವಾಚಿಯ ಮೇಲೆ ಬಂದು ಬೇರೆ ಬೇರೆ ಅರ್ಥ ವಿಶೇಷಗಳನ್ನು ಹೇಳುತ್ತವೆ. ಇದನ್ನು ಹಿಂದೆ ಕೃದ್ವಾಚಿ ಪ್ರಯೋಗದಲ್ಲಿ ನೋಡತಕ್ಕದ್ದು.

[illegible]ಸಮುಚ್ಚಯಕಾವ್ಯಯಗಳಲ್ಲಿ—ಮತ್ತು, ಉ, ಊ, ಇನು

ಕೂಡ, ಸಹ, ಸುಧಾ, ಹಾಗೂ ಇತ್ಯಾದಿಗಳು ಸಮಾನವಾದ 2 ಪದಗಳನ್ನು ಅ ಥವಾ 2 ವಾಕ್ಯಗಳನ್ನು ಜೋಡಿಸುವದರಲ್ಲಿ ಪ್ರಯೋಗಿಸಲ್ಪಟ್ಟು, ಅನುಕೂ ಲ್ಯಸಮುಚ್ಚಾಯಕಗಳೆನ್ನಿಸುತ್ತವೆ. ಇಲ್ಲವೆ, ಅಥವ, ಇದಲ್ಲದೆ, ಅದಲ್ಲದೆ, ಹೊ ರತು, ಅಲ್ಲದೆ, ಆಗಲಿ—ಆಗಲಿ ಇತ್ಯಾದಿಗಳು 2 ಪದಗಳನ್ನು ಅಥವಾ 2 ವಾ ಕ್ಯಗಳನ್ನು ಎದುರಿಡುವದರಲ್ಲಿ ಉಪಯೋಗಿಸಲ್ಪಟ್ಟು, ಉಭಯಾರ್ಥಕಸಮು ಚ್ಚಾಯಕಗಳೆನ್ನಿಸುತ್ತವೆ. ಆದರೆ, ಆದಾಗ್ಯೂ, ಪರಂತು, ಆದರೂ, ರೂ ಇ ತ್ಯಾದಿಗಳು 2 ಪದಗಳನ್ನು ಅಥವಾ 2 ವಾಕ್ಯಗಳನ್ನು ಪ್ರತಿ ಕೂಲಿಸುವಲ್ಲಿ ಪ್ರ ಯೋಗಿಸಲ್ಪಟ್ಟು, ವ್ಯತಿರೇಕಾರ್ಥಕಸಮುಚ್ಚಾಯಕಗಳೆನ್ನಿಸುತ್ತವೆ. ಅದ್ದ ರಿಂದ, ಆದಕಾರಣ, ರೆ, ಅದರನಿಮಿತ್ತ, ಆ ದೆಸೆಯಿಂದ, ಹೀಗಿರಲಾಗಿ ಇತ್ಯಾದಿಗ ಳು 2 ವಾಕ್ಯಗಳನ್ನು ಕಾರಣಾರ್ಥದಲ್ಲಿ ಪರಸ್ಪರ ಜೋಡಿಸುವಲ್ಲಿ ಪ್ರಯೋಗಿಸ ಲ್ಪಟ್ಟು, ಹೇತ್ವರ್ಥಕ ಸಮುಚ್ಚಾಯಕಗಳೆನ್ನಿಸುತ್ತವೆ. ಅಂದರೆ, ಏನಂದ ರೆ, ಹಾಗಂದರೆ, ಹ್ಯಾಗಂದರೆ ಇತ್ಯಾದಿಗಳು 2 ಪದಗಳನ್ನು ಅಥವಾ 2 ವಾಕ್ಯಗ ಳನ್ನು ವಿವರಣಾರ್ಥದಲ್ಲಿ ಜೋಡಿಸುವಲ್ಲಿ ಪ್ರಯೋಗಿಸಲ್ಪಟ್ಟು, ವ್ಯಾಖ್ಯಾರ್ಥ ಕಸಮುಚ್ಚಾಯಕಗಳೆನ್ನಿಸುತ್ತವೆ. ಆ, ಎ, ಏ, ಒ, ಓ ಇವುಗಳು ಪ್ರಶ್ನೆ ಕೇ ಳುವದರಲ್ಲಿ ಪ್ರಯೋಗಿಸಲ್ಪಟ್ಟು, ಪ್ರಶ್ನಾವಿಶಂಕಾರ್ಥಕಗಳೆನ್ನಿಸುತ್ತವೆ. "ಎ, ಏ" ಇವುಗಳು ಖಂಡಿತಾರ್ಥದಲ್ಲಿ ಪ್ರಯೋಗಿಸಲ್ಪಟ್ಟು, ಅವಧಾರಣಾರ್ಥಕಗಳೆ ನ್ನಿಸುತ್ತವೆ. "ರೆ, ರೂ (ರೆ+ಊ)" ಇವುಗಳು ಕಾಲಾರ್ಥದಲ್ಲಿ ಉಪಯೋ ಗಿಸಲ್ಪಟ್ಟು, ಪಕ್ಷಾರ್ಥಕಗಳೆನ್ನಿಸುತ್ತವೆ. ಉದಾ:

ಅನುಕೂಲ್ಯಸಮುಚ್ಚಾಯಕಕ್ಕೆ—ಅವನೂ ಅವನ ಮಗನೂ ಬಂದ ರು. ಅವನು ಆಡಿದನು ಮತ್ತು ಓಡಿದನು.

ಉಭಯಾರ್ಥಕಸಮುಚ್ಚಾಯಕಕ್ಕೆ—ನೀನಾಗಲಿ ಅವನಾಗಲಿ ಬಂದರಾ ಯಿತು. ಅವನು ಕಲಿಯಲಿ ಇಲ್ಲವೇ ಬಿಡಲಿ.

ವ್ಯತಿರೇಕಾರ್ಥಕಸಮುಚ್ಚಾಯಕಕ್ಕೆ—ಅವನು ಬಂದನು, ಆದರೆ ಸಿಲ್ಲಲಿ ಲ್ಲ. ನಾನು ವ್ಯಾಪಾರ ತಂದೆನು, ಪರಂತು ಕೆಟ್ಟುಹೋಯಿತು.

ಹೇತ್ವರ್ಥಕಸಮುಚ್ಚಾಯಕಕ್ಕೆ—ನಾನಾದರಿಂದ ನೀನೂ ಹೇಳದೆ ಹು ಡುಗನು ಆಡುತ್ತಾ ಇದ್ದನು; ಹೀಗಿರಲಾಗಿ ಕೆಟ್ಟುಹೋದನು.

ವ್ಯಾಖ್ಯಾರ್ಥಕಸಮುಚ್ಚಾಯಕಕ್ಕೆ—ದುಷ್ಟರು ಅಂದರೆ ಕೆಟ್ಟವರು

ಪಾಪಾಸಕ್ತರು; ಹಾಗೆಂದರೆ ಅವರು ಪಾಪಪ್ರವೃತ್ತರು. ಪ್ರಶ್ನಾವಿಶಂಕಾರ್ಥಕ, ಅವಧಾರಣಾರ್ಥಕ ಮತ್ತು ಪಕ್ಷಾರ್ಥಕ ನಿಪಾತಗಳಿಗೆ ಉದಾಹರಣೆಗಳನ್ನು ಹಿಂದೆ 112ನೇ ಅಂಕೆಯಲ್ಲಿ ನೋಡಿ ತಿಳಿಯ ತಕ್ಕದ್ದು. ಇವುಗಳಲ್ಲದೆ ಇನ್ನೂ, ಎಂದು, ಎಂತ, ಎಂದ, ಎಂಬ, ಎಂಬದಾಗಿ, ಎಂಬದು, ಅಂದು, ಅಂದ, ಅಂತ, ಅಂಬ, ಅಂಬದು, ಅಂಬದಾಗಿ ಇತ್ಯಾದಿ ಎನ್ನು ಮತ್ತು ಅನ್ನು ಧಾತುಗಳ ಅಪೂರ್ಣರೂಪಗಳು ಸೂಚಿತಉಪವಾಕ್ಯವನ್ನು ಪ್ರಧಾನವಾಕ್ಯಗಳಿಗೆ ಜೋಡಿಸುವಲ್ಲಿ ಬರೇ ಸಮುಚ್ಚಾಯಕಗಳಾಗಿ ಪ್ರಯೋಗಿಸಲ್ಪಡುತ್ತವೆ. ಉದಾ: ಬಾರೆಂದು ಕರೆದ ತಂದೆಗೆ ಮಗನು ಬರುತ್ತೇನೆಂಬದಾಗಿ ಉತ್ತರ ಕೊಟ್ಟನು. ಹೇಳ ಬೇಕೆಂತ ಹೇಳಿದ್ದಕ್ಕೆ ಹೇಳೆನೆಂತ ಕುಳಿತುಬಿಟ್ಟನು. ಮಾಡಬಾರದೆಂಬದಾಗಿ ಕಂಡುಬರುತ್ತೆ. ಹಾಗಾಗಲಾರದೆಂಬದಾಗಿ ನುಡಿ ಕೇಳಿಸಿತು. ಹಾಗೆ ಇರ ಕೂಡದೆಂತ ಹೇಳಿದರೆ ಹೀಗಿರ ಬಹುದೆಂದು ತಿಳಕೋ.

## ಅನುಕರಣಾವ್ಯಯಗಳ ಪ್ರಯೋಗ.

144. ಅನುಕರಣಾವ್ಯಯಗಳು ಹಿಂದೆ 113 ನೇ ಅಂಕೆಯಲ್ಲಿ ವಿವರಿಸಿರುವ ಪ್ರಕಾರ ಘಂಟೆ, ತಾಳ, ಮೃದಂಗ, ಫಿರಂಗಿ, ತುಪಾಕಿ ಮೊದಲಾದವುಗಳ ನಾದಗಳನ್ನೂ, ಬೇರೆ ಬೇರೆ ಪ್ರಾಣಿಗಳ ಕೂಗುಗಳನ್ನೂ, ಇನ್ನೂ ನಾನಾ ವಿಧದ ಧ್ವನಿಗಳನ್ನೂ ಅನುರೂಪಿಸುವಲ್ಲಿ ಪ್ರಯೋಗಿಸಲ್ಪಡುವವು. ಉದಾ: ಘಣಘಣನೆ ಘಂಟೆ ಬಡಿಯಿತು. ಕೊಕ್ಕೋಕೋಯೆಂದು ಕೋಳಿ ಕೂಗಿತು ಇತ್ಯಾದಿ.

## ಭಾವಬೋಧಕಾವ್ಯಯಗಳ ಪ್ರಯೋಗ.

145 ಭಾವಬೋಧಕಾವ್ಯಯಗಳು ಹಿಂದೆ 68 ನೇ ಪ್ರಟದಲ್ಲಿ ವಿವರಿಸಿದ ಪ್ರಕಾರ ಮನೋಭಾವನೆಗಳನ್ನು ತೋರಿಸುವಲ್ಲಿ ಉಪಯೋಗಿಸಲ್ಪಡುವವು. ಉದಾ: ಅಯ್ಯಮ್ಮಾ ಎಂದು ಕೂಗಿದನು. ಭಲರೆ ಎಂದು ಹೊಗಳಿದನು ಇತ್ಯಾದಿ.

## ಅನ್ವಯವು.

1[illegible] ವಾಕ್ಯಗಳಲ್ಲಿ ವಿಧಿಗೆ ಅನುಸಾರವಾಗಿ ಪದಗಳನ್ನು ಜೋಡಿಸು

ವ ಕ್ರಮಕ್ಕೆ ಅನ್ವಯವೆಂಬ ಹೆಸರು. ಪದಗಳನ್ನು ಒಂದಕ್ಕೊಂದು ಅನ್ವಯಿಸುವದರಲ್ಲಿ ಪದಪರ್ಯಾಯ, ಪದಸಮುಚ್ಛಯ, ಪದಸಮಭಿಹಾರ ಮತ್ತು ಪದಸಮುಚ್ಛಾಯಕಾನ್ವಯಗಳೆಂಬ 4 ಉಪಾಯಗಳು ಬರುತ್ತವೆ. ಹ್ಯಾಗಂದರೆ:—

## 1. ಪದಪರ್ಯಾಯ.

147. ವಾಕ್ಯದಲ್ಲಿ ಆಖ್ಯೆ, ಆಖ್ಯಾತ ಮತ್ತು ಆಖ್ಯಾತಸಮಾಪಕಗಳನ್ನು ಪೂರ್ವದಿಂದ ಬಂದ ರೂಢಿಯ ಪ್ರಕಾರ ಕ್ರಮವಾಗಿ ಬರೆಯುವದಕ್ಕೆ ಪದಪರ್ಯಾಯವೆಂಬ ಹೆಸರು. ಇದರ ವಿಧಿಗಳು ಯಾವವೆಂದರೆ:—

1. ಆಖ್ಯೆಯೆಂಬ ಉದ್ದೇಶ್ಯಪದವು ವಾಕ್ಯದ ಆದಿಯಲ್ಲಿ, ಅದಕ್ಕೆ ವಿಧೇಯವಾಗುವ ಆಖ್ಯಾತವು ವಾಕ್ಯದ ಅಂತದಲ್ಲಿ ಕೂಡ ಬರಬೇಕು. ಉದಾ: ಹುಡುಗನು ಕಲಿಯುತ್ತಾನೆ. ಪಕ್ಷಿಯು ಹಾರುತ್ತದೆ.

2. ಆಖ್ಯಾತ ಹೇಳುವ ಕ್ರಿಯೆಯು ಸಕರ್ಮಕವಾಗಿದ್ದರೆ ಆಖ್ಯಾತಸಮಾಪಕವಾದ ಕರ್ಮವು ಆಖ್ಯೆಗೂ ಆಖ್ಯಾತಕ್ಕೂ ನಡುವಿನಲ್ಲಿ ಬರಬೇಕು. ಉದಾ: ಬಡಿಗೆಯವನು ಮರವನ್ನು ಕೆತ್ತುತ್ತಾನೆ. ಹುಡುಗನು ಪಾಠವನ್ನು ಕಲಿಯುತ್ತಾನೆ.

3. ಆಖ್ಯೆ, ಆಖ್ಯಾತ ಮತ್ತು ಆಖ್ಯಾತಸಮಾಪಕಗಳ ವಿಶೇಷಣಗಳು ಇದ್ದಲ್ಲಿ ಅವುಗಳು ಆಯಾ ಮುಖ್ಯಪದಗಳ ಪೂರ್ವದಲ್ಲಿ ಬರಬೇಕು. ಉದಾ: ಒಳ್ಳೆ ಹುಡುಗನು ದುಷ್ಟ ಸಂಗತಿಯನ್ನು ಎಂದೂ ಮಾಡನು. ಚಿಕ್ಕ ಹುಡುಗನು ತಮ್ಮ ಯಜಮಾನರನ್ನು ಯಾವಾಗಲೂ ಸನ್ಮಾನಿಸಬೇಕು.

4. ಒಂದು ವಾಕ್ಯದಲ್ಲಿ ಕಾರಕಾರ್ಥ ಹೇಳುವ ಅನೇಕ ಪದಗಳು ಇದ್ದರೆ, ಆಖ್ಯೆ ಮತ್ತು ಆಖ್ಯಾಸಮಾಪಕಗಳನ್ನು ನಿಶೇಷಿಸುವಂಥವು, ಅವುಗಳ ಪೂರ್ವದಲ್ಲಿ ಅವುಗಳಿಗೆ ಸಮೀಪವಾಗಿಯೂ, ಆಖ್ಯಾತವನ್ನು ವಿಶೇಷಿಸುವಂಥವು ಅದರ ಸಮೀಪದಲ್ಲಿ ಇರ ಬೇಕಾದ್ದಿಲ್ಲವಾದರೂ ಅದರ ಪೂರ್ವದಲ್ಲಿಯೇ ಇರಬೇಕು; ಮತ್ತು ಅಂಥ ವಿಶೇಷಣಗಳಲ್ಲಿ ಕಾಲವಾಚಕವು ಮೊದಲನೇದಾಗಿಯೂ, ಸ್ಥಳವಾಚಕ ಇತ್ಯಾದಿ ನಂತರದ್ದಾಗಿಯೂ ಇರಬೇಕು. ಉದಾ: ಒಂದಾನೊಂದು ದಿನದಲ್ಲಿ ಶಾಲೆಯಲ್ಲಿ ಕಲಿಯುವವನಾದ ಒಬ್ಬ

ಒಂದು ಹುಡುಗನು ತನ್ನ ಮನೆಯ ಸಮೀಪದಲ್ಲಿ ಮೈಗೆಲ್ಲಾ ಕಪ್ಪು ಬೊಟ್ಟುಗಳುಳ್ಳ ಒಂದು ಚಿಕ್ಕ ಪಕ್ಷಿಯನ್ನು ನೋಡುತ್ತಾನಿತ್ತಿದ್ದನು.

5. ಪ್ರಶ್ನಾರ್ಥವನ್ನು ಕೊಡುವ ಪದಗಳು ಆಖ್ಯೆ ಮತ್ತು ಆಖ್ಯಾತಗಳ ನಡುವಿನಲ್ಲಿ ಬರುವವು; ಪ್ರಶ್ನಾರ್ಥಕ ನಿಪಾತಗಳು ಮಾತ್ರ ಪುರುಷಾತ್ಮಕರೂಪವಾದ ಆಖ್ಯಾತದ ತುದಿಯಲ್ಲಿ ಸೇರುವವು. ಉದಾ: ನೀನು ಎಲ್ಲಿಗೆ ಹೋಗುತ್ತಿ? ಅವನು ಏನು ಕೇಳುತ್ತಾನೆ? ಅವನು ಹೋದನೋ? ನೀನು ಬರುತ್ತಿಯಾ? ಇತ್ಯಾದಿ.

6. ವಿಶೇಷಣಪದವು ತಾನು ವಿಶೇಷಿಸುವ ವಿಶೇಷ್ಯಪದದ ಪೂರ್ವದಲ್ಲಿ ನಿಲ್ಲುವದು. ಉದಾ: ಒಂದು ದೊಡ್ಡ ಆನೆಯನ್ನು ಕಂಡೆನು. ಒಬ್ಬ ಚಿಕ್ಕ ಕಳ್ಳ ಹುಡುಗನು ಹೋಗುತ್ತಾನೆ.

## ಪದಸಮುಚ್ಚಯ.

148. ದ್ವಂದ್ವಸಮಾಸದಿಂದಲೂ, ಸಂಗ್ರಹಣಾರ್ಥಕಶಬ್ದಗಳಿಂದಲೂ, "ಊ" ನಿಪಾತದಿಂದಲೂ, ಪದಗಳು ಕೂಡಿಸಲ್ಪಟ್ಟರೆ ಪದಸಮುಚ್ಚಯವೆನ್ನಿಸುವದು. ಉದಾ:

ದ್ವಂದ್ವಸಮಾಸಮಾಸಕ್ಕೆ—ತಂದೆತಾಯಿಮಕ್ಕಳು, ವಸ್ತ್ರಮಾಲಾಭರಣಾನುಲೇಪನಗಳು.

ಸಂಗ್ರಹಣಾರ್ಥಕಶಬ್ದಕ್ಕೆ—ಅಕ್ಕಿ, ಬೆಲ್ಲ, ಹಾಲು, ತುಪ್ಪ, ಇವುಗಳನ್ನು ತಂದೆನು. ಅಲ್ಲಿ, ಇಲ್ಲಿ, ನಾಳೆ, ನಾಡದು, ಹಾಗೆ, ಹೀಗೆ, ಈ ಶಬ್ದಗಳು ಅವ್ಯಯಗಳಾಗಿರತಕ್ಕವೆ.

"ಊ" ನಿಪಾತಕ್ಕೆ—ಅವನೂ ಅವನಮಗನೂ ಅವನಮಕ್ಕಳೂ ಬಂದರು. ಮನೆಯಲ್ಲಿಯೂ ಶಾಲೆಯಲ್ಲಿಯೂ ಎಚ್ಚರಿಕೆಯಿಂದಿರಬೇಕು.

## ಪದಸಮಭಿಹಾರ.

149. ಒಂದು ಪದವನ್ನು ಎರಡು ಸರ್ತಿ ಹೇಳುವದಕ್ಕೆ ಪದಸಮಭಿಹಾರವೆಂದು ಹೇಳುತ್ತಾರೆ. ಇದರಲ್ಲಿ ನಾಮಪದಗಳನ್ನು ಮತ್ತು ಸರ್ವನಾಮಗಳನ್ನು ದ್ವಿರ್ವಚನ ಮಾಡಿದರೆ ನಾಮಸಮಾಭಿಹಾರವೆಂದೂ, ಆಧಿಕ್ಯಾರ್ಥ

ವನ್ನು ಹೇಳುವಂತೆ ವಿಶೇಷಣಪದಗಳನ್ನು ದ್ವಿರ್ವಚನ ಮಾಡಿದರೆ ಗುಣಸಮಭಿಹಾರವೆಂದೂ, ಕ್ರಿಯಾಪದಗಳನ್ನು ದ್ವಿರ್ವಚನ ಮಾಡಿದರೆ ಕ್ರಿಯಾಸಮಭಿಹಾರವೆಂದೂ, ಒಂದೇ ಶಬ್ದವನ್ನು 2 ಸಾರಿ ಉಪಯೋಗಿಸದೆ ಅದಕ್ಕೆ ಸಮಾನತೆಯನ್ನು ಕೊಡುವ ಮತ್ತೊಂದು ಶಬ್ದವನ್ನು ದ್ವಿರ್ವಚನವಾಗುವಂತೆ ಉಪಯೋಗಿಸಿದರೆ ತಜ್ಜಾತಿದ್ವಿರ್ವಚನವೆಂದೂ, ಸಮಭಿಹಾರದಲ್ಲಿ 4 ವಿಧ ಉಂಟು. ಉದಾ:

ನಾಮಸಮಭಿಹಾರಕ್ಕೆ—ಕಳ್ಳರು ರಾತ್ರಿರಾತ್ರಿಯಲ್ಲಿ ಬೀದಿಬೀದಿಯಿಂದ ನಡೆದು, ಮನೆಮನೆಗೆ ಹೊಕ್ಕು, ಲೂಟಿ ಮಾಡಿದರು. ಅವನವನು ತನ್ನತನ್ನ ಸ್ಥಳ ಬಿಡಬಾರದು.

ಗುಣಸಮಭಿಹಾರಕ್ಕೆ—ನಿನ್ನೆ ರಾತ್ರಿಯಲ್ಲಿ ದೊಡ್ಡದೊಡ್ಡ ಹುಲಿಗಳು ಬಂದು, ಭಾರಿಭಾರಿ ಬೊಬ್ಬೆ ಹಾಕಿ, ಒಳ್ಳೆಒಳ್ಳೆ ನಾಯಿಗಳನ್ನು ಹಿಡಿದವು.

ಕ್ರಿಯಾಸಮಭಿಹಾರಕ್ಕೆ—ಹುಡುಗರು ಈ ದಿನ ಓಡಿಓಡಿ ಬಂದು, ಬಿಡಬಿಡದೆ, ಚೆಂಡನ್ನು ಆಡ್ಯಾಡಿ, ದಣಿದಣಿದು, ಬಿದ್ದುಕೊಂಡರು.

ತಜ್ಜಾತಿದ್ವಿರ್ವಚನಕ್ಕೆ—ಬೇಡರು ತಮ್ಮ ಬಿಲ್ಲುಗಿಲ್ಲುಗಳನ್ನು ತೆಗೆದುಕೊಂಡು, ಕಾಡಿಗೆ ಹೋಗಿ, ಆಲಸ್ಯಗೀಲಸ್ಯ ಮಾಡದೆ, ಕಲ್ಲುಗಿಲ್ಲುಗಳನ್ನೂ ಬಾಣಗೀಣಗಳನ್ನೂ ಹೊಡೆಯಲು, ಅವುಗಳಿಂದ ಸತ್ತುಬಿದ್ದ ಮೃಗಗಿಗಗಳನ್ನು ಎತ್ತಿಕೊಂಡು, ತಮ್ಮ ನಾಯಿಗೀಯಿಗಳ ಸಮೇತ ತಿರುಗಿ ಮನೆಗೆ ಬಂದರು.

## ಪದಸಮುಚ್ಚಯಕಾವ್ಯಯಗಳು

150. ಸಮುಚ್ಚಯಕಾವ್ಯಯಗಳಿಂದ ಪದಗಳು ಒಂದಕ್ಕೊಂದು ಕೂಡುವ ಕಾರಣ ಆ ಅವ್ಯಯಗಳಿಗೆ ಪದಸಮುಚ್ಚಯಕಾವ್ಯಯಗಳೆನ್ನುತ್ತಾರೆ. ಅವುಗಳ ಪ್ರಯೋಗವನ್ನು ಹಿಂದೆ 143 ನೇ ಅಂಕೆಯಲ್ಲಿ ವಿವರಿಸಿರುವ ಕಾರಣ ಪುನಃ ವಿವರಿಸಲಿಲ್ಲ.

## ಪದಗಳ ಅರ್ಥಗಳು.

151. ಪದಗಳ ಅರ್ಥಗಳನ್ನು ವ್ಯಾಕರಣ, ನಿಘಂಟು, ಉಪಮಾನ, ಆಪ್ತವಾಕ್ಯ, ಲೋಕವ್ಯವಹಾರ, ವಾಕ್ಯಶೇಷ, ವ್ಯಾಖ್ಯಾನ, ಸಿದ್ಧಪದಸಾನಿಧ್ಯ, ಇವು ಮೊದಲಾದ ನಿರ್ಣಯುಗಳಿಂದ ತಿಳಿಯ ಬಹುದು. ಹ್ಯಾಗಂದರೆ:—

ವ್ಯಾಕರಣಾರ್ಥಕ್ಕೆ—"ಅಸುರ" ಅಂದರೆ ಅ = ಅಲ್ಲ, ಸುರ = ದೇವ (ದೇವನಲ್ಲದವನು); ಇಲ್ಲವೆ ಅಸು = ಜೀವ, ರ = ತೆಗಿಯುವವನು (ಜೀವ ತೆಗಿಯುವವನು).

ನಿಘಂಟಿನ ಅರ್ಥಕ್ಕೆ—"ನೆಲದೇರ" ಅಂದರೆ ಶಿವನು. "ವಾತಾಶಾರ" ಅಂದರೆ ಸರ್ಪ.

ಉಪಮಾನಾರ್ಥಕ್ಕೆ—ಹುಲಿಯು ಬೆಕ್ಕಿನ ಹಾಗೆ ಇರುತ್ತದೆಂದು ತಿಳಿದವನು ಕಾಡಿನಲ್ಲಿ ಹುಲಿಯುನ್ನು ನೋಡಿ, ಬೆಕ್ಕಿನ ಹಾಗೆಯೇ ಇರುವದರಿಂದ ಹುಲಿಯೆಂದು ತಿಳುಕೊಳ್ಳುವನು.

ಆಪ್ತವಾಕ್ಯಾರ್ಥಕ್ಕೆ—ಪಾತಾಳಗರುಡನ ಬೇರಿನಿಂದ ವಿಷ ಪರಿಹಾರವಾಗುವದೆಂದು ಸತ್ಯವಾದಿಯೊಬ್ಬನು ಹೇಳಿರಲಾಗಿ, ವಿಷ ತಾಗಿದರೆ, ಆ ಔಷಧಿಯಿಂದ ಪರಿಹಾರವಾಗುವದೆಂದು ತಿಳಿಯುವದು.

ಲೋಕವ್ಯವಹಾರಾರ್ಥಕ್ಕೆ—"ಅಂಬುಜ", ಅಂದರೆ ನೀರಿನಲ್ಲಿ ಹುಟ್ಟುವ ಶಂಖ, ಮೀನು ಮುಂತಾದವುಗಳ ಅರ್ಥ ಬರಬಹುದಾದಾಗ್ಯೂ ಲೋಕವ್ಯವಹಾರದಿಂದ ತಾವರೆ ಎಂಬಹಾಗಿಯೇ ಅರ್ಥವಾಗುವದು.

ವಾಕ್ಯಶೇಷಾರ್ಥಕ್ಕೆ—"ನೀರೊಳಗಿಪ್ಪುದನ್ನು ತಾ" ಎಂಬ ಮಾತಿಗೆ ನೀರು ಒಳಗಿರುವ ತೆಂಗಿನಕಾಯಿಯನ್ನೋ ಅಥವಾ ನೀರ ಒಳಗೆ ಇರುವ ಕಮಲವನ್ನೋ ಎಂಬ ಸಂಶಯ ಹುಟ್ಟಲು ಅದೇಸಂದರ್ಭದಲ್ಲಿ ತೆಂಗಿನಕಾಯಿಯ ಸಂಗತಿ ತಿಳಿದರೆ, ತೆಂಗಿನಕಾಯಿಯೇ ಎಂದು ಅರ್ಥಮಾಡಲಾಗುವದು.

ವ್ಯಾಖ್ಯಾನಾರ್ಥಕ್ಕೆ—ಒಂದು ಶಬ್ದಕ್ಕೆ ಅರ್ಥ ತಿಳಿಯದೆಯಿದ್ದಲ್ಲಿ ವ್ಯಾಖ್ಯಾನ ಮಾಡುವರ ಅರ್ಥದಿಂದ ತಿಳಿಯುವದು. "ಕಡಿರು" ಅಂದರೆ ಶೇಸೆ; "ಕಂದಬು" ಅಂದರೆ ನೀರು ತೋರುವ ಮಣ್ಣಿನ ಕೊಡ.

ಸಿದ್ಧಪದಸಾನಿಧ್ಯಾರ್ಥಕ್ಕೆ—ಹುಟ್ಟಡಿಯನ್ನು ನೋಡೆಂದು ಹೇಳಿದ್ದಲ್ಲಿ ನೃ

ತ್ರಶಬ್ದವು ಸಂದರ್ಭದ ಮೇಲೆ ಬಂದರೆ ಅದರ ಸಾಸಿಧ್ಯ ಬಲದಿಂದ ವೃತ್ತಗಳಲ್ಲಿ ಸೇರಿದ 6 ಚರಣದ ಪದ್ಯವೆಂದು ತಿಳಿಯುವದು; ಕೀಟಶಬ್ದವು ಸಂದರ್ಭದಲ್ಲಿ ಬಂದರೆ 6 ಕಾಲುಗಳುಳ್ಳ ತುಂಬಿಯೆಂದು ತಿಳಿಯುವದು.

152. ಪದಗಳ ಅರ್ಥದಲ್ಲಿ ಶಕ್ಯಾರ್ಥವೆಂದೂ, ಲಕ್ಷಣಾರ್ಥವೆಂದೂ, ವ್ಯಂಗಾರ್ಥವೆಂದೂ, 3 ವಿಧ ಉಂಟು. ಹ್ಯಾಗಂದರೆ:—

1. ಮೇಲೆ ಹೇಳಿದ ವ್ಯಾಕರಣಾದಿ 8 ಅರ್ಥನಿರ್ಣಯಗಳಿಂದ ತಿಳಿಯುವ ಅರ್ಥಕ್ಕೆ ಶಕ್ಯಾರ್ಥವೆಂಬ ಹೆಸರು.

2. ಶಕ್ಯಾರ್ಥದಿಂದ ಅರ್ಥ ಹೇಳದೆ ಶಕ್ಯಾರ್ಥ ಸಂಬಂಧ ಉಳ್ಳದ್ದನ್ನು ಹೇಳಿದರೆ ಲಕ್ಷಣಾರ್ಥವೆನ್ನಿಸುವದು.

3. ಒಂದು ವಾಕ್ಯವನ್ನು ಸಾಧಾರಣವಾಗಿ ಹೇಳುವದರಿಂದ ಅದರಲ್ಲಿ ಇರುವ ಗೂಢಾರ್ಥವು ತಾನಾಗಿ ತಿಳಿಯ ಬಂದಲ್ಲಿ ವ್ಯಂಗಾರ್ಥವೆಂದು ಹೇಳಲ್ಪಡುವದು. ತಾತ್ಪರ್ಯಾರ್ಥ ಕೂಡ ವ್ಯಂಗಾರ್ಥವೆನ್ನಿಸುವದು.

153. ಶಕ್ಯಾರ್ಥದಲ್ಲಿ ರೂಢವೆಂತಲೂ, ಯೋಗವೆಂತಲೂ, ಯೋಗರೂಢವೆಂತಲೂ, 3 ವಿಧ ಉಂಟು. ಹ್ಯಾಗಂದರೆ:—

1. ವ್ಯಾಕರಣದಿಂದ ತಿಳಿಯುವ ಅವಯವಾರ್ಥವಿಲ್ಲದೆ ನಿಘಂಟು ಮೊದಲಾದವುಗಳಿಂದ ಆಗುವ ಅರ್ಥಕ್ಕೆ ರೂಢವೆಂಬ ಹೆಸರು. ಉದಾ: ಕುರಿ, ಕತ್ತೆ, ಗಿಡ, ಮನೆ, ಕಾಲು, ತಲೆ ಇತ್ಯಾದಿ.

2. ವ್ಯಾಕರಣಕ್ಕನುಸಾರವಾಗಿ ಅವಯವಾರ್ಥದಿಂದ ಆಗುವ ಅರ್ಥಕ್ಕೆ ಯೋಗವೆಂಬ ಹೆಸರು. ಉದಾ: ಚಂದ್ರಮೌಳಿ (ಚಂದ್ರನನ್ನು ಸಿರಸ್ಸಿನಲ್ಲಿ ಮುಡಿದವನು = ಶಿವನು) ಪಯೋನಿಧಿ (ನೀರಿನ ರಾಶಿ = ಸಮುದ್ರ), ಐಮೊಗನು (ಐದು ಮುಖವುಳ್ಳವನು = ಶಿವನು) ಇತ್ಯಾದಿ.

3. ಅವಯವಾರ್ಥವಿದ್ದರೂ ಲೋಕರೂಢಿಯಿಂದ ರೂಢಿಯಾಗುವ ಅರ್ಥಕ್ಕೆ ಯೋಗರೂಢವೆಂಬ ಹೆಸರು. ಉದಾ: ಅಂಬುಜ (ನೀರಿನಲ್ಲಿ ಹುಟ್ಟಬಹುದಾದ ಶಂಖ, ಮೀನು ಮುಂತಾದವುಗಳನ್ನು ಹೇಳಲಾಗವದಾದರೂ ರೂಢಿಯಿಂದ ಕಮಲವೆಂಬುದೇ ಅರ್ಥವು).

154. ಲಕ್ಷಣಾರ್ಥದಲ್ಲಿ ಶುದ್ಧೆಯೆಂತಲೂ, ಗೌಣಿಯೆಂತಲೂ 2 ವಿಧ

ಉಂಟು. ಶುದ್ಧೆಯಲ್ಲಿ ಜಹಲಕ್ಷಣೆಯೆಂದೂ, ಅಜಹಲಕ್ಷಣೆಯೆಂದೂ. ಜಹದಜಹಲ್ಲಕ್ಷಣೆಯೆಂದೂ 3 ವಿಧ. ಹ್ಯಾಗಂದರೆ:—

1. ಶಕ್ಯಾರ್ಥವಿಲ್ಲದ್ದಕ್ಕೆ ಜಹಲ್ಲಕ್ಷಣೆ ಎಂಬ ಹೆಸರು. ಉದಾ: ಪಟ್ಟಣವೆಲ್ಲಾ ಹೆದರಿತು.—ಇಲ್ಲಿ ಪಟ್ಟಣದಲ್ಲಿದ್ದ ಜನರು ಹೆದರಿದರು; ಪಟ್ಟಣವಲ್ಲ ಎಂಬರ್ಥ ಬರುವದು.

2. ಶಕ್ಯಾರ್ಥವಿದ್ದು ಅದನ್ನೂ ಅದರ ಸಂಬಂಧಿಗಳನ್ನೂ ಹೇಳಿದರೆ ಅದಕ್ಕೆ ಅಜಹಲ್ಲಕ್ಷಣೆಯೆಂಬ ಹೆಸರು. ಉದಾ: ಕೊಡೆಯುವರು ಹೋಗುತ್ತಾರೆ.—ಇಲ್ಲಿ ಕೊಡೆಯುವರೂ, ಅವರ ಸಂಗಡೆ ಕೊಡೆಯಿಲ್ಲದವರೂ, ಹೋಗುತ್ತಾರೆ ಎಂಬ ಅರ್ಥ ಬರುವದು.

3. ಶಕ್ಯಾರ್ಥದಲ್ಲಿ ವಿಶೇಷಣಾಂಶವನ್ನು ಬಿಟ್ಟು, ವಿಶೇಷ್ಯವನ್ನು ಮಾತ್ರವೇ ಹಿಡಿದರೆ ಅದಕ್ಕೆ ಜಹದಜಹಲ್ಲಕ್ಷಣೆಯೆಂಬ ಹೆಸರು. ಉದಾ: ನಾವು ಅಂದು ಮದ್ರಾಸಿನಲ್ಲಿ ನೋಡಿದ್ದು ಇದೇ.—ಇಲ್ಲಿ ನೋಡಿದ್ದು ಎಂಬ ಶಬ್ದಕ್ಕೆ ದೂರದೇಶದ ಪರೋಕ್ಷಕಾಲದ ಇರುವಿಕೆಯ ಅರ್ಥವು ಬರುವದು.

155. ಗೌಣಿಯಲ್ಲಿ ಸಾರೂಪ್ಯಲಕ್ಷಣೆಯೆಂದೂ, ಸಾಧ್ಯವಸಾಯಲಕ್ಷಣೆಯೆಂದೂ 2 ವಿಧ. ಹ್ಯಾಗಂದರೆ:—

1. ಒಂದು ವಸ್ತು ಮತ್ತೊಂದು ವಸ್ತುವಿಗೆ ಅನೇಕ ಸಂಗತಿಯಲ್ಲಿ ಸರಿ ಇಲ್ಲದಿದ್ದರೂ ಆ ವಿರೋಧ ವಸ್ತುವನ್ನೇ ಸದೃಶವಾಗಿ ಹೇಳುವದಕ್ಕೆ ಸಾರೂಪ್ಯಲಕ್ಷಣವೆಂಬ ಹೆಸರು. ಉದಾ: ಈ ಮನುಷ್ಯನು ಹೆಬ್ಬುಲಿಯಾಗಿದ್ದಾನೆ. ಅವನು ದೊಡ್ಡ ಕೋಣನು ಇತ್ಯಾದಿ.

2. ಒಂದು ಬಗೆಯ ವಸ್ತುವನ್ನು ಅದೇ ತರದ ಇನ್ನೊಂದು ಬಗೆಯ ವಸ್ತುವಿನಲ್ಲಿ ಉತ್ಪ್ರೇಕ್ಷಿಸಿ ಹೇಳುವದಕ್ಕೆ ಸಾಧ್ಯವಸಾಯಲಕ್ಷಣೆಯೆಂಬ ಹೆಸರು. ಉದಾ: ಬಿಲ್ಲೆಂಬ ಮೇಘವು ಧನುಷ್ಟಂಕಾರವೆಂಬ ಗುಡುಗನ್ನು ಪ್ರಸರಿಸಲು, ವೀರರು ಬಾಣವೆಂಬ ಮಳೆಯನ್ನು ಸುರಿದರು.

156. ವ್ಯಂಗ್ಯಾರ್ಥಕ್ಕೆ:—ಉದಾ: ತುಂಬಿದ ಕೊಡ ತುಳುಕುವದಿಲ್ಲ. ಈ ಮಾತಿನ ಅರ್ಥವು ಸುಲಭವಾಗಿರುತ್ತದೆ; ಆದರೆ ಇದರಲ್ಲಿ ಇರುವ— "ತುಂಬ ವಿದ್ಯೆ ಕಲಿತವರು ಗರ್ವಪಡರು" ಎಂಬ ಗೂಢಾರ್ಥವು ವ್ಯಂಗ್ಯಾರ್ಥವಾಗಿರುತ್ತದೆ.

157. ಒಂದು ವಾಕ್ಯದಲ್ಲಿ ಇರುವ ಶಬ್ದಗಳನ್ನು ಈ ವರೆಗೆ ವಿವರಿಸಿದ ವ್ಯಾಕರಣ ಸೂತ್ರಗಳಿಗೆ ಅನುಸಾರವಾಗಿ ವ್ಯಾಕರಿಸುವ ಕ್ರಮ ಹ್ಯಾಗಂದರೆ:—

ನಾನು ತಮ್ಮ ಮನೆಗೆ ಬಂದಾಗ ಮೈಸೂರರಸುಗಳವರ ಸೇವಕನಾದ ಒಬ್ಬ ಚಿತ್ರಗಾರನು ತನ್ನ ಸಂಗಡ ಮತ್ತೊಬ್ಬ ಹಾಡುವವನನ್ನು ಕರದುಕೊಂಡು ಬಂದದ್ದನ್ನು ಕಂಡಿದ್ದೆನು, ಅವನ ನಡತೆ ಹ್ಯಾಗೆ ಎಂದು ಹೇಳುವಿರೋ?

ನಾನು—ದೇಶ್ಯಶಬ್ದ, ಸಿದ್ಧಶಬ್ದ, ಪುರುಷಾರ್ಥಕ ಸರ್ವನಾಮ, ಉತ್ತಮಪುರುಷ, ಪುಂಸ್ತ್ರೀಲಿಂಗ, ಏಕವಚನ, ಕರ್ತೃವಿಭಕ್ತಿ, "ಕಂಡಿದ್ದೆನು" ಎಂಬ ಆಖ್ಯಾತಕ್ಕೆ ಆಖ್ಯೆ.

ತಮ್ಮ—ದೇಶ್ಯ, ಸಿದ್ಧ, ಪುರುಷಾರ್ಥಕ ಸರ್ವನಾಮ (ಪೂಜಾರ್ಥದಲ್ಲಿ ಆತ್ಮಾರ್ಥಕ ಸರ್ವನಾಮದ ಬಹುವಚನ ಉಪಯೋಗಿಸಿ ಅದೆ) ಮಧ್ಯಮಪುರುಷ, ಪುಂಸ್ತ್ರೀಲಿಂಗ, ಏಕವಚನ, ಷಷ್ಠಿವಿಭಕ್ತಿ, ಸಂಬಂಧಾರ್ಥಕವಿಶೇಷಣವಾಗಿ "ಮನೆಗೆ" ಎಂಬದನ್ನು ವಿಶೇಷಿಸುತ್ತದೆ.

ಮನೆಗೆ—ದೇಶ್ಯ, ಸಿದ್ಧ, ವಸ್ತುವಾಚಕದಲ್ಲಿ ರೂಢನಾಮ, ನಪುಂಸಕಲಿಂಗ, ಏಕವಚನ, ಚತುರ್ಥಿವಿಭಕ್ತಿ ಸ್ಥಾನಾರ್ಥ ಹೇಳುತ್ತದೆ.

ಬಂದ—ದೇಶ್ಯ, ಸಿದ್ಧ, ವಿಕೃತ ಅಕರ್ಮಕಕ್ರಿಯಾಪದ, ಸಂಭವಾರ್ಥ, ನಾಮಾತ್ಮಕರೂಪದಲ್ಲಿ ಭೂತಕೃದ್ವಾಚಿ, "ಕಂಡಿದ್ದೆನು" ಎಂಬದರ ಕಾಲಾರ್ಥ ಹೇಳಲಿಕ್ಕೆ "ಆಗ" ಎಂಬ ಉಪಸರ್ಗದ ಪೂರ್ವದಲ್ಲಿ ಸೇರಿಯದೆ.

ಆಗ—ದೇಶ್ಯ, ಸಿದ್ಧ, ಅರಿಉಪಸರ್ಗಾವ್ಯಯ, "ಕಂಡಿದ್ದೆನು" ಎಂಬದರ ಕಾಲಾರ್ಥ ಹೇಳುವದಕ್ಕೆ "ಬಂದ" ಎಂಬ ಕೃದ್ವಾಚಿಗೆ ಪರವಾಗಿದೆ.

ಮೈಸೂರರಸುಗಳವರ—ದೇಶ್ಯ, ಷಷ್ಠಿ ತತ್ಪುರುಷಸಮಾಸ, ವಸ್ತುವಾಚಕದಲ್ಲಿ ಅನ್ವರ್ಥನಾಮ, ಪುಲ್ಲಿಂಗ, ಏಕವಚನ, (ಪೂಜಾರ್ಥದಲ್ಲಿ ಬಹುವಚನ ಕೊಟ್ಟದೆ) ಷಷ್ಠಿವಿಭಕ್ತಿ, ಸಂಬಂಧಾರ್ಥಕ ವಿಶೇಷಣವಾಗಿ ಸೇವಕ ಶಬ್ದವನ್ನು ವಿಶೇಷಿಸುತ್ತದೆ.

ಸೇವಕನಾದ—ತತ್ಸಮ, ವ್ಯುತ್ಪನ್ನ, ಕೃದ್ವಾಚಿಪ್ರಯುಕ್ತ ವಿಶೇಷಣ, "ಚಿತ್ರಗಾರನು" ಎಂಬದನ್ನು ವಿಶೇಷಿಸುತ್ತದೆ.

ಒಬ್ಬ=ದೇಶ್ಯ, ವ್ಯುತ್ಪನ್ನ, ಸಂಖ್ಯಾವಾಚಕವಿಶೇಷಣ, "ಚಿತ್ರಗಾರ" ಎಂಬದನ್ನು ವಿಶೇಷಿಸುತ್ತದೆ.

ಚಿತ್ರಗಾರನು=ತತ್ಸಮ, ವ್ಯುತ್ಪನ್ನಶಬ್ದದಲ್ಲಿ ತದ್ಧಿತಾಂತ, ವಸ್ತುವಾಚಕದಲ್ಲಿ ಅನ್ವರ್ಥನಾಮ, ಪುಲ್ಲಿಂಗ, ಏಕವಚನ, ಕರ್ತೃವಿಭಕ್ತಿ, "ಬಂದದ್ದನ್ನು" ಎಂಬ ಕ್ರಿಯೆಗೆ ಕರ್ತೃ.

ತನ್ನ=ದೇಶ್ಯ, ಸಿದ್ಧ, ಆತ್ಮಾರ್ಥಕಸರ್ವನಾಮ, ಪ್ರಥಮಪುರುಷ, ಪುಲ್ಲಿಂಗ, ಏಕವಚನ, ಷಷ್ಠಿವಿಭಕ್ತಿ "ಕರದುಕೊಂಡು" ಎಂಬದರ ಸಪ್ತಮ್ಯರ್ಥವನ್ನು ಕೊಡಲಿಕ್ಕೆ "ಸಂಗಡ" ಎಂಬ ಉಪಸರ್ಗದ ಪೂರ್ವದಲ್ಲಿ ಸೇರಿಯದೆ.

ಸಂಗಡ=ದೇಶ್ಯ, ಸಿದ್ಧ, ಅರಿಉಪಸರ್ಗಾವ್ಯಯ, , "ಕರದುಕೊಂಡು" ಎಂಬದರ ಸಪ್ತಮ್ಯರ್ಥ ಕೊಡಲಿಕ್ಕೆ "ತನ್ನ" ಎಂಬ ಷಷ್ಠಿ ವಿಭಕ್ತಿಗೆ ಪರವಾಗಿದೆ.

ಮತ್ತೊಬ್ಬ=ದೇಶ್ಯ, ಸಮಾಸಿತ, ಸಂಖ್ಯಾವಾಚಕಸಾಮಾನ್ಯಾರ್ಥಕಸಮಾಸಪದ, "ಹಾಡುವವನನ್ನು" ಎಂಬದನ್ನು ವಿಶೇಷಿಸುತ್ತದೆ.

ಹಾಡುವವನನ್ನು=ದೇಶ್ಯ, ಸಮಾಸಿತ, ಕೃದ್ನಾಮ, ಪುಲ್ಲಿಂಗ, ಏಕವಚನ, ದ್ವಿತೀಯವಿಭಕ್ತಿ, "ಕರದುಕೊಂಡು" ಎಂಬದರ ಕರ್ಮ.

ಕರದುಕೊಂಡು=ದೇಶ್ಯ, ಸಮಾಸಿತಧಾತು, ಉಪಕ್ರಿಯಾಸಂಯುಕ್ತಕ್ರಿಯಾಪದ, ಸಕರ್ಮಕ, ಸಂಭವಾರ್ಥ, ಅವ್ಯಯಾತ್ಮಕರೂಪದಲ್ಲಿ ಭೂತನ್ಯೂನ, "ಬಂದದ್ದನ್ನು" ಎಂಬದರ ರೀತ್ಯರ್ಥವನ್ನು ಹೇಳುತ್ತದೆ.

ಬಂದದ್ದನ್ನು=ದೇಶ್ಯ, ಸಿದ್ಧ, ಕ್ರಿಯಾನಾಮ, ನಪುಂಸಕಲಿಂಗ, ಏಕವಚನ, ದ್ವಿತೀಯವಿಭಕ್ತಿ, "ಕಂಡಿದ್ದೆನು" ಎಂಬದರ ಕರ್ಮ.

ಕಂಡಿದ್ದೆನು=ದೇಶ್ಯ, ಸಮಾಸಿತ, ಸಂಯುಕ್ತಕ್ರಿಯಾಪದ, ಸಕರ್ಮಕ, ಸಂಭವಾರ್ಥ, ಪುರುಷಾತ್ಮಕರೂಪ, ಉತ್ತಮಪುರುಷ, ಪುಂಸ್ತ್ರೀಲಿಂಗ, ಏಕವಚನ, ಅತೀತಭೂತಕಾಲ, "ನಾನು" ಎಂಬ ಆಖ್ಯೆಗೆ ಆಖ್ಯಾತ.

ಅವನ=ದೇಶ್ಯ, ಸಿದ್ಧ, ಪುರುಷಾರ್ಥಕಸರ್ವನಾಮ, ಪ್ರಥಮಪುರುಷ, ಪುಲ್ಲಿಂಗ, ಏಕವಚನ, ಷಷ್ಠಿವಿಭಕ್ತಿ, ಸಂಬಂಧಾರ್ಥಕ ವಿಶೇಷಣವಾಗಿ "[illegible]" ಎಂಬದನ್ನು ವಿಶೇಷಿಸುತ್ತದೆ.

ನಡತೆ—ದೇಶ್ಯ, ವ್ಯುತ್ಪನ್ನಶಬ್ದದಲ್ಲಿ ಕೃದಂತ, ಕ್ರಿಯಾವಾಚಕನಾಮ, ನಪುಂಸಕಲಿಂಗ, ಏಕವಚನ, ಕರ್ತೃವಿಭಕ್ತಿಗೋಸ್ಕರ ಪ್ರಕೃತಿರೂಪ ಉಪಯೋಗಿಸಿಯದೆ, "ಇರುತ್ತದೆ" ಎಂಬ ಅಧ್ಯಾಹಾರವಾದ ಆಖ್ಯಾತಕ್ಕೆ ಆಖ್ಯೆ.

ಹ್ಯಾಗೆ—ದೇಶ್ಯ, ಸಿದ್ಧ, ಕ್ರಿಯಾವಿಶೇಷಣಾವ್ಯಯ, "ಇರುತ್ತದೆ" ಎಂಬ ಅಧ್ಯಾಹಾರವಾದ ಕ್ರಿಯೆಯ ರೀತ್ಯರ್ಥವನ್ನು ಹೇಳುತ್ತದೆ.

ಎಂದು—ದೇಶ್ಯ, ಸಿದ್ಧ, "ಅವನ ನಡತೆ ಹ್ಯಾಗೆ" ಎಂಬ ವಾಕ್ಯವನ್ನು "ಹೇಳುವಿರೋ" ಎಂಬದಕ್ಕೆ ಕರ್ಮಾರ್ಥದಲ್ಲಿ ಕೂಡಿಸಲಿಕ್ಕೆ ಉಪಯೋಗಿಸಿದ ಸಮುಚ್ಚಾಯಕಾವ್ಯಯ.

ಹೇಳುವಿರೋ—ದೇಶ್ಯ, ಸಿದ್ಧ, ಕ್ರಮಕ್ರಿಯಾಪದ, ಸಕರ್ಮಕ, ಸಂಭವಾರ್ಥ, ಪುರುಷಾತ್ಮಕರೂಪ, ಪ್ರಥಮಪುರುಷ, ಪುಂಸ್ತ್ರೀಲಿಂಗ, ಬಹುವಚನ, ಭಾವಿಕಾಲ "ಓ" ಎಂಬದು ಪ್ರಶ್ನಾರ್ಥಕ ನಿಪಾತವಾಗಿ ಸೇರಿಯದೆ.





## ಛಂದೋಲಕ್ಷಣ.

158. ಗುರುಲಘುವಿವೇಕದಿಂದ ವಾಕ್ಯಗಳನ್ನು ಓದುವಂತೆ ಯತಿ, ಗಣ, ಪ್ರಾಸಾದಿ ನಿಯಮಗೊಳ್ಳಿಸಿ ಪದ್ಯಗಳನ್ನು ರಚಿಸುವ ಶಾಸ್ತ್ರಕ್ಕೆ ಛಂದೋಲಕ್ಷಣವೆಂಬ ಹೆಸರು.

159. ಛಂದೋಲಕ್ಷಣದಲ್ಲಿ ಅಕ್ಷರಗಳೇ ಮುಖ್ಯ ನೇಮವಾಗಿರುವ ವರ್ಣಛಂದಸ್ಸೆಂದೂ, ಮಾತ್ರೆಗಳೇ ಮುಖ್ಯನೇಮವಾಗಿರುವ ಮಾತ್ರಾಛಂದಸ್ಸೆಂದೂ, 2 ವಿಧ ಉಂಟು.

## ಗುರುಲಘುವಿವೇಕವು.

160. ಮಾತ್ರೆ ಎಂಬ ಹ್ರಸ್ವಾಕ್ಷರಕ್ಕೆ ಲಘುವೆಂಬ ಹೆಸರು. ಬಿಂದು ಕೂಡಿದ ಅಕ್ಷರ, ವಿಸರ್ಗ ಕೂಡಿದ ಅಕ್ಷರ, ಒತ್ತಕ್ಷರದ ಹಿಂದಿನ ಅಕ್ಷರ, ದೀರ್ಘಾಕ್ಷರ, ಪದಾಂತಾಕ್ಷರ—ಇವುಗಳು ಗುರು ಅನ್ನಿಸಿಕೊಳ್ಳುವವು. ಲಘು ಚಿಹ್ನೆ ( ᑌ ) ಗುರುಚಿಹ್ನೆ ( — ) ಈ ಪ್ರಕಾರ ಮಾಡುತ್ತಾರೆ. ಲಘು ಮುರಾಂತಕನಂತಲೂ, ಗುರು ತ್ರ್ಯಯಂಬಕನಂತಲೂ ಹೇಳುವರು.

ಅರ್ಧಾಕ್ಷರದ ಹಿಂದಿನ ಅಕ್ಷರ ಕೂಡ ಗುರುವೆಂದು ಕೆಲವರು ಅನ್ನುತ್ತಾರೆ. ಆದರೆ ಅರ್ಧಾಕ್ಷರ ಕೂಡಿರುವ ಅಕ್ಷರಕ್ಕೇನೇ ಒತ್ತಕ್ಷರವೆಂಬ ಹೆಸರಾದ ಕಾರಣ ಅದನ್ನು ಪ್ರತ್ಯೇಕವಾಗಿ ಹೇಳಬೇಕಾದ್ದು ಅಷ್ಟು ಅವಶ್ಯವಲ್ಲ. ರಕಾರದಿಂದ ಉಂಟಾದ ವತ್ತಕ್ಷರದ ಹಿಂದಿನ ಅಕ್ಷರವನ್ನು ಕೆಲವು ಕಡೆಯಲ್ಲಿ ಗುರುವಾಗಿಯೂ ಕೆಲವು ಕಡೆಯಲ್ಲಿ ಲಘುವಾಗಿಯೂ ಎಣಿಸುವದುಂಟು.

161. ಛಂದೋಲಕ್ಷಣದಲ್ಲಿ ಮಾತ್ರೆ, ಗಣ, ಪಾದ, ಪದ್ಯ ಮತ್ತು ಯತಿ, ಇವುಗಳು ಮುಖ್ಯನಿಯಮಗಳಾಗಿರುತ್ತವೆ.

1. ಒಂದು ನಿಮಿಶದಷ್ಟು ಅಥವಾ ನುಡಿಯಷ್ಟು ಕಾಲವು ಮಾತ್ರೆಯೆನ್ನಿಸುವದು. ಲಘು ಅಕ್ಷರಕ್ಕೆ ಒಂದು ಮಾತ್ರೆ, ಗುರು ಅಕ್ಷರಕ್ಕೆ 2 ಮಾತ್ರೆ, ಪ್ಲುತಕ್ಕೆ 3 ಮಾತ್ರೆ ಕೂಡ ಆಗಿರುವದು. ದೀರ್ಘವನ್ನು ಒಂದು ಮಾತ್ರೆ ಹೆಚ್ಚಾಗಿ ಎಳೆದು ಹೇಳಿದರೆ ಅಥವಾ ಹ್ರಸ್ವವನ್ನು 2 ಮಾತ್ರೆ ಹೆಚ್ಚಾಗಿ ಎಳೆದು ಹೇಳಿದರೆ ಪ್ಲುತ ಅನ್ನಿಸುವದು. ಉದಾ: "ಹೊ ಹೋ ಹೋ"

ಎಂದು ಕೋಳಿಯು ಕೂಗುವಾಗ್ಯೆ ಬರುವ 3 ಧ್ವನಿಗಳಲ್ಲಿ 1 ನೇದು 1 ಮಾತ್ರೆ, 2 ನೇದು 2 ಮಾತ್ರೆ, 3 ನೇದು 3 ಮಾತ್ರೆ ಎಂದು ಊಹಿಸ ತಕ್ಕದ್ದು.

2. ಲಘುವಾಗಲಿ, ಗುರುವಾಗಲಿ, ಅಥವಾ ಲಘು ಗುರು ಮಿಶ್ರವಾಗಿ ಆಗಲಿ, ಇರುವ 3 ಅಕ್ಷರಗಳ ಕೂಟಕ್ಕೆ ಅಥವಾ ಕೆಲವು ಮಾತ್ರೆಗಳ ಕೂಟಕ್ಕೆ ಗಣವೆಂಬ ಹೆಸರು.

## ಗಣಗಳ ವಿವರ.

I. "ಮ, ಯ, ರ, ಸ, ತ, ಜ, ಭ, ನ" ಎಂಬ 8 ಗಣಗಳು ವರ್ಣಛಂದಸ್ಸಿನಲ್ಲಿ ಹೇಳಲ್ಪಟ್ಟವೆ. ಹ್ಯಾಗಂದರೆ:—

1 ಮಗಣಕ್ಕೆ—ತ್ರಿಗುರು. ಗೋಪಾಲಂ. — — — ಭೂ. ಆಶೀರ್ವಾದದಲ್ಲಿ.
2 ಯಗಣಕ್ಕೆ—ಆದಿಲಘು. ರಮೇಶಂ. ᴗ — — ಜಲ. ಯುದ್ಧಜ್ಯಸುವಲ್ಲಿ.
3 ರಗಣಕ್ಕೆ—ಮಧ್ಯಲಘು. ಶ್ರೀವರಂ. — ᴗ — ಅಗ್ನಿ. ಶೌರ್ಯಕ್ರೋಧಗಳಲ್ಲಿ.
4 ಸಗಣಕ್ಕೆ—ಅಂತೆಗುರು. ಪರಮಂ. ᴗ ᴗ — ವಾಯು. ಕ್ಲೇಶವ್ಯಾಧಿಗಳಲ್ಲಿ.
5 ತಗಣಕ್ಕೆ—ಅಂತೆಲಘು. ಶ್ರೀರಾಮ. — — ᴗ ಆಕಾಶ. ಸುಲಿಗೆಯಲ್ಲಿ.
6 ಜಗಣಕ್ಕೆ—ಮಧ್ಯಗುರು. ಅನಂತ. ᴗ — ᴗ ರವಿ. ಶೌರ್ಯಕ್ರೋಧಗಳಲ್ಲಿ.
7 ಭಗಣಕ್ಕೆ—ಆದಿಗುರು. ಶ್ರೀಪತಿ. — ᴗ ᴗ ಶಶಿ. ಸಂತೋಷದಲ್ಲಿ.
8 ನಗಣಕ್ಕೆ—ತ್ರಿಲಘು. ರಮಣ. ᴗ ᴗ ᴗ ನಾಕ. ಕಾಮವಿಲಾಸದಲ್ಲಿ.

II, ಇದಲ್ಲದೆ ಮಾತ್ರಾಛಂದಸ್ಸಿನಲ್ಲಿ ಬ್ರಹ್ಮಗಣಗಳು 4. ವಿಷ್ಣುಗಣಗಳು 8. ರುದ್ರಗಣಗಳು 16. ಕೂಡ ಇರುತ್ತವೆ. ಇವುಗಳ ವಿವರ:—

ಬ್ರಹ್ಮಗಣ 4ಕ್ಕೆ—1. — —; 2. ᴗ ᴗ —; 3. — ᴗ; 4, ᴗ ᴗ ᴗ.

ವಿಷ್ಣುಗಣ 8ಕ್ಕೆ—1. — — —; 2. ᴗ ᴗ — —; 3. — ᴗ —; 4. ᴗ ᴗ ᴗ —; 5. — — ᴗ; 6. ᴗ ᴗ — ᴗ; 7. — ᴗ ᴗ; 8. ᴗ ᴗ ᴗ ᴗ.

ರುದ್ರಗಣ 16ಕ್ಕೆ—1. — — — —; 2. ᴗ ᴗ — — —; 3. — ᴗ — —; 4. ᴗ ᴗ ᴗ — —; 5. — — ᴗ —; 6. ᴗ ᴗ — ᴗ —; 7. — ᴗ ᴗ —; 8. ᴗ ᴗ ᴗ ᴗ —; 9. — — — ᴗ; 10. ᴗ ᴗ — — ᴗ; 11. — ᴗ — ᴗ; 12. ᴗ ᴗ ᴗ — ᴗ; 13. — — ᴗ ᴗ; 14 ᴗ ᴗ — ᴗ ᴗ; 15. — ᴗ ᴗ ᴗ; 16. ᴗ ᴗ ᴗ ᴗ ᴗ.

3. ಕೆಲವು ಗಣಗಳ ಕೂಟಕ್ಕೆ ಪಾದವೆಂಬ ಹೆಸರು. ಪಾದಕ್ಕೆ ಚರಣವೆಂದು ಸಹ ಹೇಳುತ್ತಾರೆ.

4. ಮಾತ್ರೆ, ಗಣ, ಯತಿ, ಪ್ರಾಸ, ಇವುಗಳಿಂದ ಬದ್ಧವಾದ 2, 3, 4, 6 ಮತ್ತು 8 ಪಾದಗಳುಳ್ಳದ್ದಕ್ಕೆ ಪದ್ಯವೆಂಬ ಹೆಸರು. ಪದ್ಯಕ್ಕೆ ವೃತ್ತವೆಂದು ಕೂಡ ಹೇಳುತ್ತಾರೆ. 2 ಪಾದ ಉಳ್ಳದ್ದು ದ್ವಿಪದಿಯೆಂತಲೂ, 3 ಪಾದ ಉಳ್ಳದ್ದು ತ್ರಿಪದಿಯೆಂತಲೂ, 4 ಪಾದ ಉಳ್ಳದ್ದು ಚೌಪದಿಯೆಂತಲೂ, 6 ಪಾದ ಉಳ್ಳದ್ದು ಷಟ್ಪದಿಯೆಂತಲೂ, 8 ಪಾದ ಉಳ್ಳದ್ದು ಅಷ್ಟಪದಿಯೆಂತಲೂ, ಪದ್ಯಗಳಲ್ಲಿ ನಾನಾ ವಿಧ ಉಂಟು.

## ಪ್ರಾಸಗಳ ವಿವರ.

5. ಯಾವದೊಂದು ಪದ್ಯದ ಪ್ರತಿ ಪಾದದ 2ನೇ ಅಕ್ಷರವು ಪ್ರಾಸವೆನ್ನಿಸುವದು. ಪ್ರಾಸಗಳಲ್ಲಿ ಸಿಂಹಪ್ರಾಸ, ಗಜಪ್ರಾಸ, ವೃಷಭಪ್ರಾಸ, ಶರಭಪ್ರಾಸ, ಅಜಪ್ರಾಸ ಮತ್ತು ಅಶ್ವಪ್ರಾಸವೆಂಬ 6 ವಿಧ. ಹ್ಯಾಗಂದರೆ:—

I. ಪಾದದ 2ನೇ ಅಕ್ಷರ ಹ್ರಸ್ವವಾದರೆ ಸಿಂಹಪ್ರಾಸ. ಉದಾ: ಕರುಣದಲಿ ನೀ ನೋಡು ಲಕ್ಷ್ಮೀ.

II. ಪಾದದ 2ನೇ ಅಕ್ಷರ ದೀರ್ಘವಾದರೆ ಗಜಪ್ರಾಸ. ಉದಾ: ಶ್ರೀರಾಮಂ ಕರುಣಾಕರಂ.

III. ಪಾದದ 2ನೇ ಅಕ್ಷರ ಅನುಸ್ವಾರ ಕೂಡಿದ್ದರೆ ವೃಷಭಪ್ರಾಸ. ಉದಾ: ಗೋವಿಂದಂ ಪರಮೇಶ್ವರಂ.

IV. ಪಾದದ 2ನೇ ಅಕ್ಷರ ಅನ್ಯವ್ಯಂಜನದ ಒತ್ತುಳದ್ದಾದರೆ ಶರಭಪ್ರಾಸ. ಉದಾ: ಪದ್ಮಾಸನ ಪಿತ.

V. ಪಾದದ 2ನೇ ಅಕ್ಷರ ವಿಸರ್ಗಕೂಡಿದ್ದರೆ ಅಜಪ್ರಾಸ ಉದಾ: ಪ್ರಾತಃಕಾಲದಿ ನುತಿಪುದು.

VI. ಪಾದದ 2ನೇ ಅಕ್ಷರ ದ್ವಿತ್ವವಾದರೆ. ಅಶ್ವಪ್ರಾಸ. ಉದಾ: ಚಿತ್ತನಂದದಿ ಬಂದು ಮನೆಮನೆ.

[illegible]ದ ಪ್ರಾಸಗಳನ್ನು ಉಪಯೋಗಿಸಿದ್ದಲ್ಲಿ ದೊರಕಬಹುದಾಗಿ

ಛಂದೋಲಕ್ಷಣದಲ್ಲಿ ಕಾಣಿಸಿದ ಫಲಗಳು.:—ಸಿಂಹಕ್ಕೆ—ಅತಿವಿಭವ. ಗಜಕ್ಕೆ—ರಾಜ್ಯಲಾಭ. ವೃಷಭಕ್ಕೆ—ಸಂಪದ. ಶರಭಕ್ಕೆ—ಸಿರಿ. ಅಜಕ್ಕೆ—ಭಂಗ. ಆಶ್ವಕ್ಕೆ—ಜಯ.

ಇದಲ್ಲದೆ ವಿನುತಪ್ರಾಸ, ಶಾಂತಪ್ರಾಸ, ಸಮೀಪಪ್ರಾಸ, ವರ್ಗಪ್ರಾಸ, ಅಂತ್ಯಪ್ರಾಸ ಮತ್ತು ಅನುಗತಪ್ರಾಸವೆಂಬ ಇನ್ನೂ 6 ಪ್ರಾಸಗಳುಂಟು ಹ್ಯಾಗಂದರೆ:—

"ಣನ" ಮತ್ತು "ಲಳ" ಗಳಿಗೆ ಸಂಬಧಾಕ್ಷರಗಳೆಂಬ ಹೆಸರು. ಒಂದು ಪದ್ಯದಪಾದಗಳಲ್ಲಿ ಕೆಲವದರ ಪ್ರಾಣಸ್ಥಾನಕ್ಕೆ "ಣ" ಕೆಲವದರ ಪ್ರಾಣಸ್ಥಾನಕ್ಕೆ "ನ" ಮತ್ತು ಅದೇ ಪ್ರಕಾರ "ಲಳ" ಗಳು ಕೂಡ ಬಂದರೆ ವಿನುತಪ್ರಾಸವೆಂಬ ಹೆಸರು. ಉದಾ: ಸನ್ನುತದಮಮತಾಹಿಯರಿವಿನ | ಕಣ್ಣಾಕುಕ್ಕಿತು ನೃಪತಿಯೂನುಡಿ. ಕಳುಹಿ ಮರಳಿದನತ್ತಲಾ ಖಳ | ಕುಲತಿಲಕ ಮನೆಗಿತ್ತಲಾ ಶ್ರೀ ಇತ್ಯಾದಿ.

ಪ್ರಾಸಾಕ್ಷರಗಳಿರುವ ಒಂದೇ ರೂಪವಾದ ಶಬ್ದಗಳಿಗೆ ಬೇರೆಬೇರೆ ಅರ್ಥಗಳು ಬಂದರೆ ಶಾಂತಪ್ರಾಸವೆಂಬ ಹೆಸರು. ಉದಾ: ಪಾವನ ತುಲಾಭರಣವಮ್ಮಾಡಿಕೊಂಡೆಸವ | ಪಾವನತರಸ್ವರೂಪಂ ನಾರದಾದಿಮುನಿ ಪಾವನತೆಪಾದಪಂಕೇರುಹದ್ವಂದ್ವಂ ಇತ್ಯಾದಿ.

ಸಮೀಪಾಕ್ಷರಗಳಾದ "ಶಷಸ"ಗಳಲ್ಲಿ ಒಂದೊಂದನ್ನು ಪದ್ಯದ ಒಂದೊಂದು ಪಾದಗಳಿಗೆ ಪ್ರಾಸಾಕ್ಷರವಾಗಿ ಇಟ್ಟರೆ ಸಮೀಪ ಪ್ರಾಸವೆಂಬ ಹೆಸರು. ಉದಾ. ವಸುಮತಿಭಾರವನಿಳುಹಲು | ದಶರಥನುದರದಿ ಜನಿಸುತ್ತಾಪೌ | ರುಷದಿಂ ಇತ್ಯಾದಿ.

ಅನುನಾಸಿಕಗಳನ್ನುಳಿದ ವರ್ಗಾಕ್ಷರಗಳು ಬೇರೆಬೇರೆ ಪಾದಗಳಲ್ಲಿ ಪ್ರಾಸಾಕ್ಷರವಾಗಿ ನಿತ್ತರೆ ವರ್ಗ ಪ್ರಾಸವೆಂಬ ಹೆಸರು.

ಉದಾ: ಸಕಲಸಂನ್ಮಾನದಲಿ ತನ್ನಯ | ಮಗಳ ಮಾವನ ಮನಿ | ಸುತಲತಿ | ಸುಖದಿ ಇತ್ಯಾದಿ.

ಒಂದು ಪಾದದ ಕಡೆಯಲ್ಲಿರುವ ಅಕ್ಷರವೇ ಬೇರೆ ಪಾದದ ಅಂತ್ಯದಲ್ಲಿ ಬಂ

ದರೆ ಅಂತ್ಯಪ್ರಾಸವೆಂಬ ಹೆಸರು. ಉದಾ: ಅಘಹರನೇ | ನಗಧರನೇ | ಜಗದೊಡೆಯಾ | ನಿಗಮಪ್ರಿಯಾ ಇತ್ಯಾದಿ.

ಪದ್ಯದ ಎಲ್ಲಾ ಪಾದಗಳಲ್ಲಿ ಎರಡೆರಡಕ್ಷರಗಳು ಪ್ರಾಸಸ್ಥಾನದಲ್ಲಿ ಅನುಗತವಾಗಿ ಬಂದರೆ ಅನುಗತಪ್ರಾಸವೆಂಬ ಹೆಸರು. ಉದಾ: ಎಡೆಯೆಡೆಯೊಳಡಿಕಿರಿದ ದೋಣಿಗಳಶ್ರೇಣಿಗಳ | ಘುಡುಘುಡಿಸುತೇಳ್ವ ಮತ್ಸ್ಯಾಳಿಗಳಕೆಳಗಳ ಇತ್ಯಾದಿ.

6. ಒಂದು ಪದ್ಯವನ್ನು ಓದುವಾಗ ನಿಲ್ಲಿಸಬೇಕಾದ ಸ್ಥಳಕ್ಕೆ ಯತಿ ಎಂಬ ಹೆಸರು.

162. ವರ್ಣಛಂದಸ್ಸು ಮ, ಯ, ರ, ಸ, ತ, ಜ, ಭ, ನ ವೆಂಬ ಗಣಗಳಿಂದಲೂ, ಗುರುಲಘುಗಳಿಂದಲೂ, ಕೂಡಿರುವ ಸಮಾನವಾದ 4 ಪಾದಗಳುಳ್ಳ ವೃತ್ತಗಳುಳ್ಳದ್ದಾಗಿ 26 ವಿಧವಾಗಿರುವದು. ಹ್ಯಾಗಂದರೆ:—

1. ಉಕ್ತಾಯೆಂಬ ಛಂದಸ್ಸಿನಲ್ಲಿ 1 ಅಕ್ಷರ ಪಾದವಾಗುಳ್ಳ 2 ವೃತ್ತಗಳಲ್ಲಿ ಶ್ರೀವೃತ್ತಕ್ಕೆ—ಪ್ರತಿಪಾದಕ್ಕೆ 1 ಗುರು. ಉದಾ: ಶ್ರೀ | ಶಂ | ಕಾಂ | ತೇ||

2. ಅತ್ಯುಕ್ತಾಯೆಂಬ ಛಂದಸ್ಸಿನಲ್ಲಿ 2 ಅಕ್ಷರ ಪಾದವಾಗುಳ್ಳ 4 ವೃತ್ತಗಳಲ್ಲಿ ಗೇಯವೃತ್ತಕ್ಕೆ—ಪ್ರತಿಪಾದದಲ್ಲಿ 2 ಗುರು. ಉದಾ. ಶ್ರೀಯಂ | ಗೇಯಂ | ದೇಯಂ | ಪೇಯಂ||

3. ಮಧ್ಯಾಯೆಂಬ ಛಂಧಸ್ಸಿನಲ್ಲಿ 3 ಅಕ್ಷರಪಾದವಾಗುಳ್ಳ 8 ವೃತ್ತಗಳಲ್ಲಿ ಶ್ಯಾಮಾಂಗಕ್ಕೆ—ಪ್ರತಿಪಾದದಲ್ಲಿ ಮಗಣ. ಉದಾ: ಭೂವಿಪ್ರೋ | ದ್ಧಾಮಂಕೇಳ್ | ಶ್ಯಾಮಾಂಗೀ | ಶ್ಯಾಮಾಂಗಂ || ಪ್ರವರವೃತ್ತಕ್ಕೆ—ಪ್ರತಿಪಾದದಲ್ಲಿ ಸಗಣ. ಉದಾ: ಪವನೋ | ದ್ಭವಧಿಂ | ಪ್ರವರಂ | ಪ್ರವರೇ|| ಪಾವನವೃತ್ತಕ್ಕೆ—ಪ್ರತಿಪಾದದಲ್ಲಿ ರಗಣ. ಉದಾ: ಪಾವಕೋ | ದ್ಭಾವಧಿಂ | ಶ್ರೀವಧೂ | ಪಾವನಂ||.

4. ಪ್ರತಿಷ್ಠಾ ಛಂಧಸ್ಸಿನಲ್ಲಿ 4 ಅಕ್ಷರ ಪಾದವಾಗುಳ್ಳ 16 ವೃತ್ತಗಳಲ್ಲಿ ಪ್ರೇಮವೃತ್ತಕ್ಕೆ—ಪ್ರತಿಪಾದದಲ್ಲಿ ಮಗಣವೂ ಗುರುವೂ. ಉದಾ: ಧಾತ್ರೀ ಕಾಂತರ್ | ಪ್ರೀತ್ಯಾ ದ್ರೇಕರ್ | ಕಾಂತೇ ಕೂಡಲ್ | ಪ್ರೀತೇ ಪ್ರೇಮಂ|| ಸೌಂದರಕ್ಕೆ—ಪ್ರತಿಪಾದಕ್ಕೆ ಭಗಣವೂ ಗುರುವೂ. ಉದಾ: ಚಂಬಿರಸಂ | ಚಂಪ್ರದ [illegible] ಸುಂದಿರಲಾ | ಸೌಂದರವೇ||

5. ಸುಪ್ರತಿಷ್ಠಾ ಛಂದಸ್ಸಿನಲ್ಲಿ 5 ಅಕ್ಷರ ಪಾದವಾಗುಳ್ಳ 32 ವೃತ್ತ ಗಳಲ್ಲಿ ನಂದಕಕ್ಕೆ—ರಗಣವೂ ಲಘುವೂ ಗುರುವೂ. ಉದಾ: ಬಂದು ವ ಹ್ನಿಯೊಳ್ | ನಿಂದಡಂಲಗಂ | ಸೌಂದರಾಂಗಿಕೇ | ಳ್ಸಂದನಂದಕಂ || ಸರಸಿರು ಹಕ್ಕೆ—ನಗಣವೂ ಲಘುವೂ ಗುರುವೂ. ಉದಾ: ಬರೆನಲಗಂ | ಸರಸಿರು ಹಂ | ವರವರನಾ | ಪರಮಜನಾ || ಕಾಂಚನಮಾಲೆಗೆ—ಭಗಣವೂ 2 ಗುರವೂ. ಉದಾ: ಮಿಂಚುವ ಚಂದ್ರಂ | ಗಂಟೆಯರುದ್ರರ್ | ಸಂಚೆಸೆವೃತ್ತಂ | ಕಾಂ ಚನಮಾಲೆ||

6. ಗಾಯತ್ರೀಛಂದಸ್ಸಿನಲ್ಲಿ 6 ಅಕ್ಷರಪಾದವಾಗುಳ್ಳ 64 ವೃತ್ತಗಳಲ್ಲಿ ಉದಾತ್ತಕ್ಕೆ—ನಗಣವೂ ಯಗಣವೂ. ಉದಾ: ನಯುಗಣದಿಂದಂ | ನಿಯತ ಮಿದಕ್ಕುಂ | ಪ್ರಿಯಲಲನೇಕೇಳ್ | ನಯದಿನುದಾತ್ತಂ || ಕುಮುದಕ್ಕೆ—2 ನ ಗಣ ಉದಾ: ಅನಿಲದ್ವಿತಯಂ | ಘನಮೆಲ್ಲಿಯುಮೆಂ | ಬಿನಮೊಂದಿರೆಕೇಳ್ | ವನಿತೇಕುಮುದಂ || ವಿಚಿತ್ರಕ್ಕೆ—ಯುಗಣ. ಉದಾ: ಪಯೋಯುಗ್ಮದಿಂದಂ | ಪಯೋಜಾಯತಾಕ್ಷಿ | ಪ್ರಯೋಗಪ್ರಸಿದ್ಧಂ | ನಿಯುಕ್ತಂವಿಚಿತ್ರಂ ||

7. ಉಷ್ಣಿಕ್ಛಂದಸ್ಸಿನಲ್ಲಿ 7 ಅಕ್ಷರಪಾದವಾಗುಳ್ಳ 128 ವೃತ್ತಗಳಲ್ಲಿ ವಿಭೂತಿಗೆ—ರಗಣವೂ ಜಗಣವೂ ಗುರುವೂ. ಉದಾ: ತೇಜಮರ್ಕನೀಶನಿಂ | ದೋಜೆವೆತ್ತುಬಂದೊಡಂ | ಭೋಜಪತ್ರನೇತ್ರೆಕೇ | ಳೀಜಗದ್ವಿಭೂತಿಯಂ || ಸುಲಭಕ್ಕೆ—2 ನಗಣಗಳೂ ಗುರುವೂ. ಉದಾ: ನನಭವಯುತದಿಂ | ವನರುಹ ವದನೇ | ನಿನಗರುಪುವೆನಾನ್ | ಜನನುತೆಸುಲಭಂ || ಸರಳಕ್ಕೆ—ಸಗಣವೂ ರಗ ಣವೂ ಗುರವೂ. ಉದಾ: ಮರುತೆಂಜಾತವೇದಂ | ಹರನಂಕೂಡಿಬಂದಂ | ದ ರವಿಂದಾಯತಾಕ್ಷೀ ಸರಳಂವೃತ್ತನಾಮಂ ||

8. ಅನುಷ್ಟುಪ್ಛಂದಸ್ಸಿನಲ್ಲಿ 8 ಅಕ್ಷರ ಪಾದವಾಗುಳ್ಳ 256 ವೃತ್ತಗ ಳಲ್ಲಿ ವಿದ್ಯುನ್ಮಾಲೆಗೆ—2 ಮಗಣಗಳೂ 2 ಗುರುವೂ. ಉದಾ: ಪಿಂತುರ್ವೀ ಯುಗ್ಮಂಗಳ್ಬರ್ಕುಂ | ಮುಂತೀಶಾನದ್ವಂದ್ವಂತೋರ್ಕುಂ | ಸಂತಂನೀಕೇಳಂ ಭೋಜಾಕ್ಷೀ | ಕಾಂತೇವಿದ್ಯುನ್ಮಾಲಾವೃತ್ತಂ || ಮಾಣವಕಕ್ಕೆ—ಭಗಣವೂ ತ ಗಣವೂ ಲಘುವೂ ಗುರುವೂ. ಉದಾ: ಕಾಂತೆಶಶಿವ್ಯೋಮಲಗಂ | ಮುಂತಿ ರೆನೀಕೇಳ್ಕೆಳದೀ | ಭ್ರಾಂತಿಯೊಳೇಂ ಪಿಂಗಳನೆಂ | ದಂತೆಪೆಸರ್ಮಾಣವಕಂ ||

9. ಬೃಹತೀ ಛಂದಸ್ಸಿನಲ್ಲಿ 9 ಅಕ್ಷರ ಪಾದವಾಗುಳ್ಳ [redacted] ವೃತ್ತ

ಗಳಲ್ಲಿ. ಉದಯಕ್ಕೆ—ಭಗಣವೂ ಜಗಣವೂ ನಗಣವೂ. ಭದ್ರಕಕ್ಕೆ—ರಗಣವೂ ನಗಣವೂ ರಗಣವೂ. ಭುಜಗ ಶಿಶುಸೃತಕ್ಕೆ—2 ನಗಣಗಳೂ ಮಗಣವೂ. ಬೃಹತಿಗೆ—3 ಯಗಣಗಳು. ಮಯೂರಕ್ಕೆ—ನಗಣವೂ ಸಗಣವೂ ಯಗಣವೂ.

10. ಪಂಕ್ತಿಛಂದಸ್ಸಿನಲ್ಲಿ 10 ಅಕ್ಷರ ಪಾದವಾಗುಳ್ಳ 1024 ವೃತ್ತಗಳಲ್ಲಿ ಪಣವಕಕ್ಕೆ—ಮಗಣವೂ ನಗಣವೂ ಯಗಣವೂ ಗುರುವೂ ಇದ್ದು 7ನೇ ಸ್ಥಾನದಲ್ಲಿ ಯತಿ ನಿಲ್ಲುವದು. ಮಂದಾನಿಲಕ್ಕೆ—ಭಗಣವೂ ಮಗಣವೂ ಸಗಣವೂ ಗುರುವೂ ಇರಬೇಕು. ಮತ್ತಕ್ಕೆ—ಮಗಣವೂ ಭಗಣವೂ ಸಗಣವೂ ಗುರುವೂ ಇದ್ದು 4ನೇ ಮತ್ತು 8ನೇ ಸ್ಥಾನಗಳಲ್ಲಿ ಯತಿ ನಿಲ್ಲುವದು.

11. ತ್ರಿಷ್ಟುಪ್ ಛಂದಸ್ಸಿನಲ್ಲಿ 11 ಅಕ್ಷರ ಪಾದವಾಗುಳ್ಳ 2048 ವೃತ್ತಗಳಲ್ಲಿ ಭ್ರಮರವಿಲಸಿತಕ್ಕೆ—ಮಗಣವೂ ಭಗಣವೂ ನಗಣವೂ ಲಘುವೂ ಗುರುವೂ ಇದ್ದು 4ನೇ ಸ್ಥಾನದಲ್ಲಿ ಯತಿ ನಿಲ್ಲುವದು. ಇಂದ್ರವಜ್ರಕ್ಕೆ—2 ತಗಣಗಳೂ ಜಗಣವೂ 2 ಗುರುಗಳೂ ಇದ್ದು 8ನೇ ಸ್ಥಾನದಲ್ಲಿ ಯತಿ ನಿಲ್ಲುವದು.

12. ಜಗತೀಛಂದಸ್ಸಿನಲ್ಲಿ 12 ಅಕ್ಷರ ಪಾದವಾಗುಳ್ಳ 4096 ವೃತ್ತಗಳಲ್ಲಿ ದ್ರುತಪೂರ್ವವಿಲಂಬಿತಕ್ಕೆ—ನಗಣವೂ 2 ಭಗಣಗಳೂ ರಗಣವೂ ಇದ್ದು 9ನೇ ಸ್ಥಾನದಲ್ಲಿ ಯತಿ ನಿಲ್ಲುವದು. ಸ್ರಗ್ವಿಣಿಗೆ—4 ರಗಣಗಳು ಇರುವವು.

13. ಅತಿಜಗತೀಛಂದಸ್ಸಿನಲ್ಲಿ 13 ಅಕ್ಷರ ಪಾದವಾಗುಳ್ಳ 8192 ವೃತ್ತಗಳಲ್ಲಿ ಮತ್ತಮಯೂರಕ್ಕೆ—ಮಗಣವೂ ತಗಣವೂ ಯಗಣವೂ ಸಗಣವೂ ಗುರುವೂ ಇದ್ದು 9ನೇ ಸ್ಥಾನದಲ್ಲಿ ಯತಿ ನಿಲ್ಲುವದು. ಕೋಮಲರುಚಿರಕ್ಕೆ—4 ಭಗಣಗಳೂ ಗುರುವೂ ಇದ್ದು 9ನೇ ಸ್ಥಾನದಲ್ಲಿ ಯತಿ ನಿಲ್ಲುವದು.

14. ಶಕ್ವರೀಛಂದಸ್ಸಿನಲ್ಲಿ 14 ಅಕ್ಷರ ಪಾದವಾಗುಳ್ಳ 16384 ವೃತ್ತಗಳಲ್ಲಿ ಪ್ರಹರಣಕಲಿತಕ್ಕೆ—2 ನಗಣಗಳೂ ಭಗಣವೂ ನಗಣವೂ ಲಘುವೂ ಗುರುವೂ ಇದ್ದು 7ನೇ ಸ್ಥಾನದಲ್ಲಿ ಯತಿ ನಿಲ್ಲುವದು. ಸೌಂದರ

ಕ್ಕೆ—2 ಭಗಣಗಳೂ ರಗಣವೂ ಸಗಣವೂ ಲಘುವೂ ಗುರುವೂ ಇದ್ದು 8ನೇ ಸ್ಥಾನದಲ್ಲಿ ಯತಿ ನಿಲ್ಲುವದು.

15. ಅತಿಶಕ್ವರೀ ಛಂದಸ್ಸಿನಲ್ಲಿ 15 ಅಕ್ಷರ ಪಾದವಾಗುಳ್ಳ 32768 ವೃತ್ತಗಳಲ್ಲಿ ಮಣಿಗಣನಿಕರಕ್ಕೆ—4 ನಗಣಗಳೂ ಸಗಣವೂ ಇರುವವು. ವಿಚಿತ್ರಲಲಿತಕ್ಕೆ—ನಗಣವೂ ಸಗಣವೂ ನಗಣವೂ ಭಗಣವೂ ಯಗಣವೂ ಇದ್ದು 11ನೇ ಸ್ಥಾನದಲ್ಲಿ ಯತಿ ನಿಲ್ಲುವದು: ಮಾಲಿನಿಗೆ—2 ನಗಣಗಳೂ ಮಗಣವೂ 2 ಯಗಣಗಳೂ ಇದ್ದು 8ನೇ ಸ್ಥಾನದಲ್ಲಿ ಯತಿ ನಿಲ್ಲುವದು.

16. ಅಷ್ಟಿಛಂದಸ್ಸಿನಲ್ಲಿ 16 ಅಕ್ಷರ ಪಾದವಾಗುಳ್ಳ 65536 ವೃತ್ತಗಳಲ್ಲಿ ಲಲಿತಪದಕ್ಕೆ—3 ನಗಣಗಳೂ ಜಗಣವೂ ಸಗಣವೂ ಗುರುವೂ ಇದ್ದು 10ನೇ ಸ್ಥಾನದಲ್ಲಿ ಯತಿ ನಿಲ್ಲುವದು. ವಿಜಯಾನಂದಕ್ಕೆ—ಯಗಣವೂ ಮಗಣವೂ ನಗಣವೂ ಸಗಣವೂ ರಗಣವೂ ಗುರುವೂ ಇದ್ದು 12ನೇ ಸ್ಥಾನದಲ್ಲಿ ಯತಿ ನಿಲ್ಲುವದು.

17. ಅತ್ಯಷ್ಟಿಛಂದಸ್ಸಿನಲ್ಲಿ 17 ಅಕ್ಷರ ಪಾದವಾಗುಳ್ಳ 131072 ವೃತ್ತಗಳಲ್ಲಿ ಮಂದಾಕ್ರಾಂತಕ್ಕೆ—ಮಗಣವೂ ಭಗಣವೂ ನಗಣವೂ 2 ತಗಣಗಳೂ 2 ಗುರುಗಳೂ ಇದ್ದು 10ನೇ ಸ್ಥಾನದಲ್ಲಿ ಯತಿ ನಿಲ್ಲುವದು. ವನಜದಳಕ್ಕೆ—5 ನಗಣಗಳೂ 2 ಗುರುಗಳೂ ಇರುವವು.

18. ಧೃತಿಛಂದಸ್ಸಿನಲ್ಲಿ 18 ಅಕ್ಷರ ಪಾದವಾಗುಳ್ಳ 262144 ವೃತ್ತಗಳಲ್ಲಿ ಮಲ್ಲಿಕಾಮಾಲೆಗೆ—ರಗಣವೂ ಸಗಣವೂ 2 ಜಗಣಗಳೂ ಭಗಣವೂ ರಗಣವೂ ಇದ್ದು 8ನೇ ಸ್ಥಾನದಲ್ಲಿ ಯತಿ ನಿಲ್ಲುವದು. ಕಂದರ್ಪಜಾತಕ್ಕೆ—ಮಗಣವೂ ತಗಣವೂ ನಗಣವೂ 3 ಯಗಣಗಳೂ ಇದ್ದು 5ನೇ ಸ್ಥಾನದಲ್ಲಿ ಯತಿ ನಿಲ್ಲುವದು.

19. ಅತಿಧೃತಿಛಂದಸ್ಸಿನಲ್ಲಿ 19 ಅಕ್ಷರ ಪಾದವಾಗುಳ್ಳ 524288 ವೃತ್ತಗಳಲ್ಲಿ ತರಳಕ್ಕೆ—ನಗಣವೂ ಭಗಣವೂ ರಗಣವೂ ಸಗಣವೂ 2 ಜಗಣಗಳೂ ಗುರುವೂ ಇದ್ದು 8ನೇ ಸ್ಥಾನದಲ್ಲಿ ಯತಿ ನಿಲ್ಲುವದು. ಶಾರ್ದೂಲವಿಕ್ರೀಡಿತಕ್ಕೆ—ಮಗಣವೂ ಸಗಣವೂ ಜಗಣವೂ ಸಗಣವೂ 2 ತಗಣಗಳೂ ಗುರುವೂ ಇದ್ದು 12ನೇ ಸ್ಥಾನದಲ್ಲಿ ಯತಿ ನಿಲ್ಲುವದು.

20. ಕೃತಿಛಂದಸ್ಸಿನಲ್ಲಿ 20 ಅಕ್ಷರ ಪಾದವಾಗುಳ್ಳ 1048576 ವೃತ್ತಗಳಲ್ಲಿ ಮತ್ತೇಭವಿಕ್ರೀಡಿತಕ್ಕೆ—ಸಗಣವೂ ಭಗಣವೂ ರಗಣವೂ ನಗಣವೂ ಮಗಣವೂ ಯಗಣವೂ ಲಘುವೂ ಗುರುವೂ ಇದ್ದು 13ನೇ ಸ್ಥಾನದಲ್ಲಿ ಯತಿ ನಿಲ್ಲುವದು. ಉತ್ಪಲಮಾಲೆಗೆ—ಭಗಣವೂ ರಗಣವೂ ನಗಣವೂ 2 ಭಗಣಗಳೂ ರಗಣವೂ ಲಘುವೂ ಗುರುವೂ ಇದ್ದು 11 ನೇ ಸ್ಥಾನದಲ್ಲಿ ಯತಿ ನಿಲ್ಲುವದು.

21. ಪ್ರಕೃತಿಛಂದಸ್ಸಿನಲ್ಲಿ 21 ಅಕ್ಷರ ಪಾದವಾಗುಳ್ಳ 2097152 ವೃತ್ತಗಳಲ್ಲಿ ಚಂಪಕಮಾಲೆಗೆ—ನಗಣವೂ ಜಗಣವೂ ಭಗಣವೂ 3 ಜಗಣಗಳೂ ರಗಣವೂ ಇದ್ದು 13ನೇ ಸ್ಥಾನದಲ್ಲಿ ಯತಿ ನಿಲ್ಲುವದು. ಸ್ರಗ್ಧರೆಗೆ—ಮಗಣವೂ ರಗಣವೂ ಭಗಣವೂ ನಗಣವೂ 3 ಯಗಣಗಳೂ ಇದ್ದು 7ನೇ ಸ್ಥಾನದಲ್ಲಿ ಯತಿ ನಿಲ್ಲುವದು.

22. ಆಕೃತಿಛಂದಸ್ಸಿನಲ್ಲಿ 22 ಅಕ್ಷರ ಪಾದವಾಗುಳ್ಳ 4194304 ವೃತ್ತಗಳಲ್ಲಿ ಮಹಾಸ್ರಗ್ಧರೆಗೆ—ಸಗಣವೂ 2 ತಗಣಗಳೂ ನಗಣವೂ ಸಗಣವೂ 2 ರಗಣಗಳೂ ಗುರುವೂ ಇದ್ದು 15ನೇ ಸ್ಥಾನದಲ್ಲಿ ಯತಿ ನಿಲ್ಲುವದು. ಭದ್ರಕಕ್ಕೆ—ಭಗಣವೂ ರಗಣವೂ ನಗಣವೂ ರಗಣವೂ ನಗಣವೂ ರಗಣವೂ ನಗಣವೂ ಗುರುವೂ ಇದ್ದು 15ನೇ ಸ್ಥಾನದಲ್ಲಿ ಯತಿ ನಿಲ್ಲುವದು.

23. ವಿಕೃತಿಛಂದಸ್ಸಿನಲ್ಲಿ 23 ಅಕ್ಷರ ಪಾದವಾಗುಳ್ಳ 8388608 ವೃತ್ತಗಳಲ್ಲಿ ಮತ್ತಾಕ್ರೀಡೆಗೆ—2 ಮಗಣಗಳೂ ತಗಣವೂ 4 ನಗಣಗಳೂ ಲಘುವೂ ಗುರುವೂ ಇದ್ದು 8ನೇ ಸ್ಥಾನದಲ್ಲಿ ಯತಿ ನಿಲ್ಲುವದು. ಹಂಸಗತಿಗೆ—ಸಗಣವೂ 6 ಜಗಣಗಳೂ ಲಘುವೂ ಗುರುವೂ ಇದ್ದು 8ನೇ ಸ್ಥಾನದಲ್ಲಿ ಯತಿ ನಿಲ್ಲುವದು.

24. ಸಂಕೃತಿಛಂದಸ್ಸಿನಲ್ಲಿ 24 ಅಕ್ಷರ ಪಾದವಾಗುಳ್ಳ 16777216 ವೃತ್ತಗಳಲ್ಲಿ ಲಲಿತಕ್ಕೆ—2 ನಗಣಗಳೂ ಭಗಣವೂ ನಗಣವೂ ಜಗಣವೂ 2 ನಗಣಗಳೂ ಯಗಣವೂ ಇದ್ದು 7ನೇ ಮತ್ತು 14ನೇ ಸ್ಥಳಗಳಲ್ಲಿ ಯತಿ ನಿಲ್ಲುವದು. ತನ್ವಿಗೆ—ಭಗಣವೂ ತಗಣವೂ ನಗಣವೂ ಸಗಣವೂ 2 ಭಗ

ಣಗಳೂ ನಗಣವೂ ಯಗಣವೂ ಇದ್ದು 5ನೇ ಮತ್ತು 12ನೇ ಸ್ಥಾನದಲ್ಲಿ ಯತಿ ನಿಲ್ಲುವದು.

25. ಅಭಿಕೃತಿಛಂದಸ್ಸಿನಲ್ಲಿ 25 ಅಕ್ಷರ ಪಾದವಾಗುಳ್ಳ 33554432 ವೃತ್ತಗಳಲ್ಲಿ ಹಂಸಪದಕ್ಕೆ—4 ನಗಣಗಳೂ ಸಗಣವೂ 3 ಭಗಣಗಳೂ ಗುರುವೂ ಇದ್ದು 8ನೇ ಮತ್ತು 15ನೇ ಸ್ಥಾನದಲ್ಲಿ ಯತಿ ನಿಲ್ಲುವದು. ವಿದಳಿತವನರುಹಕ್ಕೆ—8 ನಗಣಗಳೂ ಗುರುವೂ ಇದ್ದು 12ನೇ ಸ್ಥಾನದಲ್ಲಿ ಯತಿ ನಿಲ್ಲುವದು.

26. ಉತ್ಕೃತಿಛಂದಸ್ಸಿನಲ್ಲಿ 26 ಅಕ್ಷರ ಪಾದವಾಗುಳ್ಳ 67108864 ವೃತ್ತಗಳಲ್ಲಿ ಭುಜಂಗವಿಜೃಂಭಿತಕ್ಕೆ—2 ಮಗಣಗಳೂ ತಣವೂ 3 ನಗಣಗಳೂ ರಗಣವೂ ಸಗಣವೂ ಲಘುವೂ ಗುರುವೂ ಇದ್ದು 8ನೇ ಮತ್ತು 19ನೇ ಸ್ಥಾನದಲ್ಲಿ ಯತಿ ನಿಲ್ಲುವದು. ವನಲತೆಗೆ—8 ನಗಣಗಳೂ 2 ಗುರುವೂ ಇದ್ದು 8ನೇ ಮತ್ತು 16ನೇ ಸ್ಥಾನದಲ್ಲ ಯತಿ ನಿಲ್ಲುವದು.

163. ಒಂದೊಂದು ಪಾದದಲ್ಲಿ ಇಷ್ಟೇ ಮಾತ್ರೆಗಳಿರ ಬೇಕೆಂಬ ಮಾತ್ರಾನಿಯಮವುಳ್ಳ ಹೆಚ್ಚಾಗಿ ಅಸಮಪಾದಗಳಿಂದ ಕೂಡಿರುವ ಛಂದಸ್ಸಿಗೆ ಮಾತ್ರಾಛಂದಸ್ಸೆಂಬ ಹೆಸರು. ಇದರಲ್ಲಿ ಕಂದ, ರಘುಟಿ (ರಗಳೆ), ದ್ವಿಪದಿ, ತ್ರಿಪದಿ, ಚತುಷ್ಪದಿ, ಷಟ್ಪದಿ ಮುಂತಾದ ವೃತ್ತಗಳು ಮುಖ್ಯವಾಗಿರುತ್ತವೆ. ಅವುಗಳ ವಿವರ ಹ್ಯಾಗಂದರೆ:—

1. ಕಂದ— 1ನೇ, 3ನೇ ಪಾದಗಳಲ್ಲಿ 12 ಮಾತ್ರೆಗಳೂ, 2ನೇ, 4ನೇ ಪಾದಗಳಲ್ಲಿ 20 ಮಾತ್ರೆಗಳೂ, ಇರುವ ವೃತ್ತಕ್ಕೆ ಕಂದವೆಂಬ ಹೆಸರು. ಉದಾ: ಪನ್ನೆರಡು ಮಾತ್ರೆ ಮೊದಲೊಳ್ | ಸನ್ನುತವಿಪ್ಪತ್ತು ಮಾತ್ರೆಯೆರಡನೆ ಯಡಿಯೊಳ್ | ಇನ್ನಿಪ್ಪವು ಮಿಾತೆರದಿಂ | ಬಿನ್ನಣ ಮೇನ್ಕಂದ ಲಕ್ಷಣಂ ಕಮಲಮುಖೀ||

2. ರಘುಟ—ಇದರಲ್ಲಿ ಮಂದಾನಿಲ, ಲಲಿತ ಮತ್ತು ಉತ್ಸಾಹವೆಂಬ 3 ವಿಧ ಉಂಟು. ಪ್ರತಿ ಪಾದದಲ್ಲಿ 16 ಮಾತ್ರೆಗಳಿದ್ದು ಆಗುವ 4 ಪಾದಗಳುಳ್ಳ ವೃತ್ತಕ್ಕೆ ಮಂದಾನಿಲವೆಂತಲೂ, ಪ್ರತಿ ಪಾದದಲ್ಲಿ 20 ಮಾತ್ರೆಗಳಿದ್ದು ಆಗುವ 4 ಪಾದಗಳುಳ್ಳ ವೃತ್ತಕ್ಕೆ ಲಲಿತವೆಂತಲೂ, ಪ್ರತಿ ಪಾದದಲ್ಲಿ 24 ಮಾ

ತ್ರೆಗಳಿದ್ದು ಆಗುವ ನಾಲ್ಕು ಪಾದಗಳುಳ್ಳ ವೃತ್ತಕ್ಕೆ ಉತ್ಸಾಹವೆಂತಲೂ ಹೇಳುತ್ತಾರೆ. ಉದಾ:

ಮಂದಾನಿಲಕ್ಕೆ—ಇಂದಿಗೊ ನಾಳೆಯೊ, ಬಂದಪುದೆಂಬಾ | ಸಂಧಿಯುಕಾಲವು, ತಿಳಿದಪುದೆಂಬಾ | ಮಂದಮತಿಗಳನು, ಜಗದೊಳಗೆಲ್ಲ | ಕುಂದದೆಪೊಗಳುವ, ಇದು ತೆರವಲ್ಲ ||

ಲಲಿತಕ್ಕೆ—ತಂಗಿ ಸೌಭದ್ರೆಯು ನಾನು ಸಂಗಾತಲಿರಲು | ಕಂಗಳ ಮುಚ್ಚುವೆನೆಂದು ಕರದರಮ್ಮಯ್ಯಾ | ಅಂಗಳದೊಳಾಡೆಂದರೆ ನಾನೊಲ್ಲೆನೆಂಪೆನು | ಸಂಗರಹಿತೆನೆಂದೆನ್ನಯ ಸಂಗಬಿಟ್ಟರೂ ||

ಉತ್ಸಾಹಕ್ಕೆ—ಬಲ್ಲಹರೊಳ್ ಬಲ್ಲ ಜೊಸೆಫ್ ನಿಲ್ಲಿ ನಿನ್ನ ಪೋಲ್ಪರ್‍ಯ್ಯ | ರಿಲ್ಲ ನಿಲ್ಲ ವಿಲ್ಲ ವೀ ಪುರಲ್ಲಿ ನಿನ್ನ ಶಿಷ್ಯರಾ | ಬಲ್ಲಿದರೆಂದೆಲ್ಲ ಜಾಣರಿಲ್ಲಿ ಸೊಲ್ಲಿಪಂತಿರೇ ಪಿ | ಫುಲ್ಲಿಸಿದೆ ಸತ್ಕೀರ್ತಿಫಲಾವೊಳ್ಳತಾಯ್ತುಧೀರುಲೇ ||

3. ದ್ವಿಪದಿ—ಪ್ರತಿ ಪಾದದಲ್ಲಿಯೂ 19 ಮಾತ್ರೆಗಳಿದ್ದು 10ನೇ 19ನೇ ಸ್ಥಾನದಲ್ಲಿ ಯತಿಯು ನಿತ್ತು 2 ಪಾದಗಳಿಂದ ಆಗುವ ವೃತ್ತಕ್ಕೆ ದ್ವಿಪದಿಯೆಂಬ ಹೆಸರು. ಉದಾ: ಗುರು ಪಾಂಡುರಂಗ ಯತಿಗಳನು ಧ್ಯಾನಿಸುತಾ | ಹಿರಿಯುವರ ಪದಯುಗಂಗಳಿಗೆರಗಿ ಮತ್ತಾ ||

4. ತ್ರಿಪದಿ— 1ನೇ ಪಾದದಲ್ಲಿ 20 ಮಾತ್ರೆಗಳೂ, 2ನೇ ಪಾದದಲ್ಲಿ 17 ಮಾತ್ರೆಗಳೂ, 3ನೇ ಪಾದದಲ್ಲ 13 ಮಾತ್ರೆಗಳು ಕೂಡ ಇದ್ದು 1ನೇ ಪಾದದ ಉತ್ತರಾರ್ಧದಲ್ಲಿಯೂ ಪ್ರಾಸಾಕ್ಷರ ಸೇರುವ 3 ಪಾದಗಳುಳ್ಳ ವೃತ್ತಕ್ಕೆ ತ್ರಿಪದಿಯೆಂಬ ಹೆಸರು. ಉದಾ: ಇಂದುವಿನೊಳುರಿಯುಂಟೆ, ಸಿಂಧುವಿನೊಳರುಬುಂಟೆ | ಕುಂದಪೀರನೊಳು ಭಯವುಂಟೆ ಭಕ್ತಗೆ | ಸಂದೇಹವುಂಟೆ ಸರ್ವಜ್ಞ.

5. ಚತುಷ್ಪದಿ—ಪ್ರತಿಪಾದದಲ್ಲಿ 18 ಮಾತ್ರೆಗಳಿದ್ದು 10ನೇ ಮತ್ತು 18ನೇ ಸ್ಥಾನದಲ್ಲಿ ಯತಿಯು ನಿಲ್ಲುವ 4 ಪಾದಗಳುಳ್ಳ ವೃತ್ತಕ್ಕೆ ಚತುಷ್ಪದಿಯೆಂಬ ಹೆಸರು. ಚತುಷ್ಪದಿಗೆ ಚೌಪದಿಯೆಂತಲೂ ಹೇಳುತ್ತಾರೆ. ಉದಾ: ಶ್ರೀಗಣನಾಥೇಶ್ವರನೆ, ನಾಗಭೂಷಣನೆ | ಬೇಗದಲಿ ಕೊಡುಮತಿಯ, ಸಿದ್ಧಿದಾಯಕನೆ | ಭೋಗಿ ಭೂಷಣ ಮುಖ್ಯ, ವಂದೆಕಲ್ಯಾಣಿ | ಈಗಲೇ ಕೊಡುಮತಿಯ, [illegible] ವೇಣಿ ವಾಣಿ ||

6. ಷಟ್ಪದಿ—6 ಪಾದವಾಗುಳ್ಳ ವೃತ್ತ್ಗಗಳಿಗೆ ಷಟ್ಪದಿಗಳೆಂಬ ಹೆಸರು. ಇವುಗಳಲ್ಲಿ ಶರಷಟ್ಪದಿ, ಕುಸುಮಷಟ್ಪದಿ, ಭೋಗಷಟ್ಪದಿ, ಭಾಮಿನಿಷಟ್ಪದಿ, ಪರಿವರ್ಧಿನಿಷಟ್ಪದಿ ಮತ್ತು ವಾರ್ಧಕಷಟ್ಪದಿ ಎಂಬ 6 ವಿಧವುಂಟು. ಇವುಗಳ ವಿವರ ಹ್ಯಾಗಂದರೆ:—

I. 1, 2, 4, 5ನೇ ಪಾದಗಳಲ್ಲಿ 8 ಮಾತ್ರೆಗಳು, 3, 6ನೇ ಪಾದಗಳಲ್ಲಿ 14 ಮಾತ್ರೆಗಳು, ಈ ಪ್ರಕಾರ 60 ಮಾತ್ರೆಗಳುಳ್ಳ ವೃತ್ತಕ್ಕೆ ಶರಷಟ್ಪದಿ ಎಂಬ ಹೆಸರು. ಉದಾ: ಮೆರವೆರಡಡಿಯು | ತ್ತರದೆರಡಡಿಯೊಳ್ | ಕರಿಲಘುಗಳ್ಮೂರಾರನೆಯು || ಚರಣದಿಮನುವಿಂ | ತರವತ್ತುಲಘುವು | ಶರಷಟ್ಪದಿಗಂಬುಜನಯನೇ ||

II. 1, 2, 4, 5ನೇ ಪಾದಗಳಲ್ಲಿ 10 ಮಾತ್ರೆಗಳು, 3, 6ನೇ ಪಾದಗಳಲ್ಲಿ 17 ಮಾತ್ರೆಗಳು, ಈ ಪ್ರಕಾರ 70 ಮಾತ್ರೆಗಳುಳ್ಳ ವೃತ್ತಕ್ಕೆ ಕುಸುಮಷಟ್ಪದಿ ಯೆಂಬ ಹೆಸರು. ಉದಾ: ಒಸೆಯೆಮೊದಲೆರಡುನಾ | ಲ್ಕೈಸವ್ವೈದನೆಯು ಪದದಿ | ದಶದಶಾಮಾತ್ರೆ ಮೂರಾರನೆಯೊಳೂ || ವಿಸುಪ ಪದಿನೇಳು ಲಘು | ರಸವಿನೆಪ್ಪತ್ನಾಲ್ಕು | ಕುಸುಮಷಟ್ಪದಿಗೆ ಪಂಕಜಲೋಚನೇ ||

III. 1, 2, 4, 5ನೇ ಪಾದಗಳಲ್ಲಿ 12 ಮಾತ್ರೆಗಳು 3, 6ನೇ ಪಾದಗಳಲ್ಲಿ 20 ಮಾತ್ರೆಗಳು, ಈ ಪ್ರಕಾರ 88 ಮಾತ್ರೆಗಳುಳ್ಳ ವೃತಕ್ಕೆ ಭೋಗಷಟ್ಪದಿ ಯೆಂಬ ಹೆಸರು. ಉದಾ: ಪೊಳೆವ ಮೊದಲಿನೆರಡುಪದದಿ | ಬಳಿಕೆ ಚರಮದೆರಡುಪದಕೆ | ಕಳೆಗಳರ್ಕ ಸಂಖೆಯೂರುಮೂರಣಂಘ್ರಿಗೇ || ತಿಳಿಯಲಿರ್ಪತಿರ್ಪತಿಂತು | ಕಳೆಗಳೆಂಬತೆಂಟರಿಂದೆ | ಕಲಿತವಾಗಲೊಡನೆ ಲಲನೆ ಭೋಗಷಟ್ಪದೀ ||

IV. 1, 2, 4, 5ನೇ ಪಾದಗಳಲ್ಲಿ 14 ಮಾತ್ರೆಗಳು, 3, 6ನೇ ಪಾದಗಳಲ್ಲಿ 23 ಮಾತ್ರೆಗಳು, ಈ ಪ್ರಕಾರ 102 ಮಾತ್ರೆಗಳುಳ್ಳ ವೃತ್ತಕ್ಕೆ ಭಾಮಿನಿಷಟ್ಪದಿ ಯೆಂಬ ಹೆಸರು. ಉದಾ: ಮೊದಲೆರಡು ನಾಲ್ಕೈದೆನಿಪಸ | ತ್ಪದದಿಮನುಸಂಖ್ಯಾತ ಮಾತ್ರೆಯು | ತುದಿಯ ಮೂರಾರನೆಯೊಳಿರ್ಪತ್ಮೂರು ಮಾತ್ರೆಗಳೂ || ಒದವಿದೀ ಪರಿಯೂರು ಪಾದಕೆ | ಪುದಿದ ಮಾತ್ರೆಯು ನೂರೆರಡುಕೇ | ಳಿದುವೆ ಭಾಮಿನಿಯೆಂದೆನಿಪ ಷಟ್ಪದಿಯ ಲಕ್ಷಣವೂ ||

V. 1, 2, 4, 5ನೇ ಪಾದಗಳಲ್ಲಿ 16 ಮಾತ್ರೆಗಳು, 3, 6ನೇ ಪಾದಗಳಲ್ಲಿ

26 ಮಾತ್ರೆಗಳು, ಈ ಪ್ರಕಾರ 116 ಮಾತ್ರೆಗಳುಳ್ಳ ವೃತ್ತಕ್ಕೆ ಪರಿವರ್ಧಿನಿಷಟ್ಪದಿಯೆಂಬ ಹೆಸರು. ಉದಾ: ಪಾದಗಳೆರಡೆರೊಳುತ್ತರದೆರಡುಂ | ಪಾದದಿ ಷೋಡಶ ಷೋಡಶ ಮಾತ್ರೆಯುಂ | ಭೇದಿಸಿ ಮೂರನೆ ಯಾರನೆಯಡಿಯೊಳ್ ಲಘು ವಿಪ್ಪತ್ತಾರೂ || ಸಾದರಮಿಂತಾರಡಿಯೊಳ್ಗಣಿಯಿಸೆ | ಶೋಧಿತ ಲಘು ನೂರಾ ಪದಿನಾರೆಲೆ | ಕಾದಲೆ ಕೇಳಿಂತಿದು ನಿಶ್ಚಯ ಪರಿವರ್ಧಿನಿ ಷಟ್ಪದಿಗೆ ||

VI. 1, 2, 4, 5 ನೇ ಪಾದಗಳಲ್ಲಿ 20 ಮಾತ್ರೆಗಳು, 3, 6 ನೇ ಪಾದಗಳಲ್ಲಿ 32 ಮಾತ್ರೆಗಳು, ಈ ಪ್ರಕಾರ 144 ಮಾತ್ರೆಗಳುಳ್ಳ ವೃತ್ತಕ್ಕೆ ವಾರ್ಧಕ ಷಟ್ಪದಿಯೆಂಬ ಹೆಸರು. ಉದಾ: ಲೀಲೆಯಿಂವಾರ್ಧಕದ ಷಟ್ಪದಿಯ ಮೊದಲಪದ | ದೇಳಿಗೆಯುಮಿಪ್ಪತ್ತು ಮಾತ್ರೆಯಿಂದೆಸದಿರ್ಕು | ಮಾಲಿತಮೆನಿಪ ಮೂರಾರನೆಯ ಪಾದದೊಳ್ಮೂವತ್ತೆರಡು ಮಾತ್ರೆಯುಂ || ಮೇಲೆನೆ ವಿರಾಜಿಸುಗುಮಿಂತಾರುಪಾದಂಗ | ಳಾಲಿಸಲ್ಮಾತ್ರೆಗಳ್ನೂರ ನಾಲ್ವತ್ತೆರಿಂ | ಮೇಲೆ ನಾಲ್ಕೆಸದೆ ಪ್ಪೆಛಂದೊಂಬು ರಾಶಿಯೊಳ್ನೀ ಕೇಳ್ವುದೆಂದುವದನೇ ||

## ಅಲಂಕಾರ ಶಾಸ್ತ್ರ.

164. ಕವಿತೆಯನ್ನು ಅಲಂಕರಿಸುವ ಶಬ್ದಾರ್ಥಶೋಭೆಯೇ ಅಲಂಕಾರವೆನ್ನಿಸುವದು. ಅಲಂಕಾರ ರಹಿತವಾದ ಕವಿತೆಯು ನಿಸ್ಸಾರವಾಗಿರುವದು. ಅಂಥ ಅಲಂಕಾರಗಳು ಕನ್ನಡದಲ್ಲಿ ಅನೇಕವಾಗಿದ್ದು ಅವುಗಳನ್ನೆಲ್ಲಾ ವಿವರಿಸಿದ್ದಲ್ಲಿ ಈ ವ್ಯಾಕರಣವು ಹೆಚ್ಚು ದೊಡ್ಡದಾಗುವದೆಂಬ ಭೀತಿಯಿಂದ ಅವುಗಳಲ್ಲಿ ಮುಖ್ಯವಾದ ಕೆಲವನ್ನು ಮಾತ್ರವೇ ಈ ಕೆಳಗೆ ವಿವರಿಸಲಾಯಿತು.

1. ಉಪಮಾಲಂಕಾರ—ಕವಿತೆಯಿಂದ ಯಾವ ತಾತ್ಪರ್ಯವು ವಿವರಿಸಲಾಗುತ್ತದೋ ಅದಕ್ಕೆ ಉಪಮೇಯವೆಂಬ ಹೆಸರು. ಉಪಮೇಯವು ಯಾವದರ ಕೂಡ ಹೋಲಿಸಲ್ಪಡುತ್ತದೋ ಅದಕ್ಕೆ ಉಪಮಾನವೆಂಬ ಹೆಸರು. ಯಾವ ಗುಣದಿಂದ ಅಥವಾ ಕ್ರಿಯೆಯಿಂದ ಅಥವಾ ಸ್ಥಿತಿಯಿಂದ ಒಂದು ವಸ್ತುವು ಮತ್ತೊಂದು ವಸ್ತುವಿನ ಹಾಗೆ ಇರುತ್ತದೆಂದು ಹೋಲಿಸಲ್ಪಡುತ್ತದೋ ಅಂಥಾದ್ದಕ್ಕೆ ಉಪಮಾಲಂಕಾರವೆಂದು ಹೇಳುತ್ತಾರೆ. ಅಂ

ತ್ತೆ, ಓಲ್, ಹಾಗೆ, ಓಸಾದಿ ಮುಂತಾದ ಶಬ್ದಗಳು ಉಪಮೆ ಹೇಳುವವುಗಳಾಗಿರುತ್ತವೆ. ಉದಾ: ಕುಂದದಂತೆ ರದನಂ | ಚಂಪಿರನಂತೆಸವ ಚಲ್ವವದನಂ. ರನ್ನ ಪುತ್ಥಳಿ ಬೊಂಬೆಯಂತೆ ಕಾಮನಕೈಯ್ಯ | ಕನ್ನಡಿಕದಪಿನ ಕಡು ಸುಪ್ರವೀಣೆಯೂ. ಪರಿಧಿಪರಿವೃತ್ತವಿಯವ್ವೊಲ್ಬಿಜ ಪರಿಧಿಪರಿವೃತ್ತ ಗರವೆಸದುದು ಇತ್ಯಾದಿ.

2. ಪ್ರತೀಪಾಲಂಕಾರ—ಉಪಮೇಯುವನ್ನು ಉಪಮೇಯುವಾಗಿ ಹೇಳದೆ ಉಪಮಾನವನ್ನು ಉಪಮೇಯುವಾಗಿ ಹೇಳಿದರೆ ಪ್ರತೀಪಾಲಂಕಾರವೆನ್ನಿಸುವದು. ಉದಾ: ಚಂದ್ರನು ಅವಳಮುಖದ ಹಾಗಿದ್ದಾನೆ. ಪಾವಂ ನೋಡಲು ಕಾಂಕ್ಷಿಪಾತೆಜಡೆಯೂ | ಭಾವೆಂಸದಾನೋಳ್ಪನು ಇತ್ಯಾದಿ.

3. ಉಲ್ಲೇಖಾಲಂಕಾರ—ಒಂದು ವಸ್ತುವನ್ನು ಅನೇಕ ವಿಧವಾಗಿ ವರ್ಣಿಸುವದಕ್ಕೆ ಉಲ್ಲೇಖಾಲಂಕಾರವೆನ್ನುವರು. ಉದಾ: ಶೌರ್ಯದಲಿ ಸುರೇಂದ್ರನಾ | ಉದಾರದಲಿಧನಾಧಿಪನುಕೇಳ್ | ಧೈರ್ಯದಲಿಹಿಮಾದ್ರಿಯಂತಿಹನಾತಕೇಳೆಂಬಾ||

4. ರೂಪಕಾಲಂಕಾರ—ಉಪಮೆಯನ್ನು ಹೇಳದೆ ಒಂದು ವಸ್ತುವನ್ನು ಇನ್ನೊಂದು ವಸ್ತುವಾಗಿರತ್ತದೆಂದು ಭೇಧವಿಲ್ಲದೆ ಹೇಳುವದಕ್ಕೆ ರೂಪಕಾಲಂಕಾರವೆಂಬ ಹೆಸರು. ಉದಾ: ಪಸರಿಸಿತು ಮಧುಮಾಸತಾವರೆ | ಯೆಸಳದೋಣಿಯಮೇಲೆಹಾಯ್ದುವು | ಕುಸುಮರಸದುಬ್ಬರದತೊರೆಯನು ಕೂಡೆ ತುಂಬಿಗಳೂ. ಪೊಳೆವ ಗುಡಾರಗಳಬುದ್ಬುದುದೆ ಪೋಪಬ | ಪ್ಪಲಘುವಾಜಿಗಳ ತೆರೆಗಳ ಇತ್ಯಾದಿ.

5. ಭ್ರಾಂತ್ಯಲಂಕಾರ—ಒಂದು ವಸ್ತುವಿನ ನಿಜತ್ವ ತಿಳಿಯದೆ ಅದನ್ನು ಬೇರೆ ವಸ್ತುವಾಗಿ ಎಣಿಸಿ ಭ್ರಾಂತಿಗೊಳ್ಳುವದಕ್ಕೆ ಭ್ರಾಂತ್ಯಲಂಕಾರವೆಂಬ ಹೆಸರು. ಉದಾ: ಮಿಗೆ ಮುತ್ತಿ ಮೊರೆವ ತುಂಬಿಗಳ ತಿಂಥಿಣಿಯನೇ | ಮುಗಿಲೆಂದು ಸುಳಿವ ಗಾಳಿಗೆ ಬಿಡದೆ ನರ್ತಿಪಲ | ತೆಗಳ ಕುಡಿಗೊನರ ನುಣ್ಬೊಬ್ಬರನೇ ಮಿಂಚೆಂದು ಸೊಗೆಯಿಸುವ ಪೂಗಳಿಂದ||ಪೊಗುವ ಮಕರಂದಬಿಂದುಗಳನೇ ಮಳೆಗಳೆಂ | ದೊಗೆವಸಂತಸದೊಳವಗಮಿದ್ದು ಕುಣಿವಸೋ | ನೆಗಳ ಬಳಗಂಗಳಂ ಮಗನೆ ಕಂಡೈ ಇತ್ಯಾದಿ.

6. ಉತ್ಪ್ರೇಕ್ಷಾಲಂಕಾರ—ಒಂದು ವಸ್ತುವನ್ನು ಮತ್ತೊಂದು

ಸ್ತುವಿನ ಹಾಗೆ ಇರಬಹುದೆಂದು ಊಹಿಸಿ ಹೇಳುವದಕ್ಕೆ ಉತ್ಪ್ರೇಕ್ಷಾಲಂಕಾರವೆಂಬ ಹೆಸರು. ಉದಾ: ಸಿಂಧ ಸೀಗುರಿ ಛತ್ರ ಚಾಮರ ಪತಾಕೆಗಳ್ | ಸಂದಣಿಸಿ ಗಗನಮಂ ಮುಸುಕಲ್ಕೆ ತಪಮೂಡಿ | ದಂಧಕಾರಂಗಳಂ ಕೆಡಿಸಿದವು ರತ್ನಾಭರಣಕಾಂತಿಗಳ್ ಭೂಪರಾ. ಕಾರ್ಮುಗಿಲಶಿಡಿಲರವದಂದಮಾಗಿರೆ ಕರದ | ಕಾರ್ಮುಕಧ್ವನಿ ಮಿಂಚೆನಂತೆ ಪೊಳಪೊಳವ ಪೊಂದೇರ್ಮೆರೆಯೆ ಇತ್ಯಾದಿ.

7. ಅತಿಶಯೋಕ್ತ್ಯಲಂಕಾರ—ಒಂದು ವಸ್ತುವನ್ನು ಬೇರೊಂದರರೂಪವಾಗಿ ಇರುವಂತೆ ಅತಿಶಯಗೊಳಿಸುವದಕ್ಕೆ ಅಥವಾ ಆಗದೆ ಇರುವದನ್ನು ಆಯಿತೆಂದು ವರ್ಣಿಸುವದಕ್ಕೆ ಅತಿಶಯೋಕ್ತ್ಯಲಂಕಾರವೆನ್ನುವರು. ಉದಾ: ಕಡುಗೆಂಪೆಸವ ತಳಿರ ತನಿಗೆಂಡವಮಂ ಕಲಕಿ | ನಡೆದು ಮೊನೆಮುಗುಳಸ್ತ್ರಂಗಳಂ ಪಾಯ್ದುವಾ | ಮಿಡಿಯರಾಜಿಪ ವಜ್ರಮುಷ್ಟಿಯುಂಪಿಡಿದು ಇತ್ಯಾದಿ. ಇದಕ್ಕೆ ರೂಪಕಾತಿಶಯಯೋಕ್ತ್ಯಲಂಕಾರವೆನ್ನುತ್ತಾರೆ. ಆ ಅರಮನೆಗೆ ಮುಗಿಲನ್ನು ಮುಟ್ಟುವ ಆರು ಉಪ್ಪರಿಗೆಗಳು ಇದ್ದವು. ಇದಕ್ಕೆ ಸಂಬಂಧಾತಿಶಯೋಕ್ತ್ಯಲಂಕಾರವೆನ್ನುತ್ತಾರೆ.

8. ನಿಂದ್ಯಾಸ್ತುತ್ಯಲಂಕಾರ—ನಿಂದ್ಯೆಯನ್ನು ಮಾಡಿ ಹೊಗಳುವದಕ್ಕೆ ನಿಂದ್ಯಾಸ್ತುತ್ಯಲಂಕಾರವೆನ್ನುತ್ತಾರೆ. ಉದಾ: ಮಗಗೆ ಮೈದುನನಾದಾ | ಮಗಳಿಗೆ ಪತಿಯಾದಾ | ಅಳಿಯಗಳಿಯನಾದಾ | ಮಗಳಿಗಳಿಯನಾದಾ ಇತ್ಯಾದಿ.

9. ಶ್ಲೇಷಾಲಂಕಾರ—ಬೇರೆ ಬೇರೆ ಅರ್ಥಗಳಿಂದ ವರ್ಣಿಸುವದಕ್ಕೆ ಶ್ಲೇಷಾಲಂಕಾರವೆಂಬ ಹೆಸರು. ಉದಾ: ನವನವಾಗಮಮಾದೆ ರಾಜನಭ್ಯುದಯ ದೋಳ್ | ಕುವಲಯ ಶ್ರೀವಿರಾಜಿತಮಪ್ಪುದೇಂ ಕೌತುಕಮೇ ಇತ್ಯಾದಿ.

10. ವ್ಯಾಘಾತಾಲಂಕಾರ—ಯಾವದೊಂದು ಕಾರಣದಿಂದ ಒಂದು ಕಾರ್ಯವು ನಡೆಯುತ್ತದೆಂದು ಹೇಳುವಲ್ಲಿ ಅದಕ್ಕೆ ವಿರೋಧವಾಗಿ ಅದೇ ಕಾರಣದಿಂದ ಬೇರೊಂದು ಕಾರ್ಯ ಹುಟ್ಟುತ್ತದೆಂದು ಹೇಳುವದಕ್ಕೆ ವ್ಯಾಘಾತಾಲಂಕಾರವೆನ್ನುತ್ತಾರೆ. ಉದಾ: ಸಜ್ಜನರು ಹ್ಯಾಗೆ ತಮ್ಮ ಮರಣದಿಂದ ದುಃಖಪಡಿಸುತ್ತಾರೋ ಹಾಗೆಯೇ ದುರ್ಜನರು ತಮ್ಮ ಮರಣದಿಂದ ಸುಖಪಡಿಸುತ್ತಾರೆ.

11. ಅಸಂಗತ್ಯಲಂಕಾರ—ಕಾರಣವು ಒಂದು ಕಡೆಯಲ್ಲಿ ನಡೆದರೆ

ಕಾರ್ಯವು ಇನ್ನೊಂದು ಕಡೆಯಲ್ಲಿ ನಡೆಯಿತೆಂದು ಹೇಳುವದಕ್ಕೆ ಅಸಂಗತ್ಯಲಂಕಾರವೆನ್ನುವರು. ಉದಾ: ಕುಂಡೆಗೆ ಬಡೆದಲ್ಲಿ ದೌಡೆ ಹಲ್ಲು ಬಿತ್ತು. ಕಾಡಿನಲ್ಲಿ ಹುಲಿ ಕೂಗಿದರೆ ನಾಡಿನಲ್ಲ ಒಕ್ಕಲು ತೆಗದರು ಇತ್ಯಾದಿ.

12. ವಿಷಮಾಲಂಕಾರ—ಹಿತಕಾರ್ಯಗಳಿಂದ ಅಹಿತವಾಗುವದಕ್ಕೆ ವಿಷಮಾಲಂಕಾರವೆಂಬ ಹೆಸರು. ಉದಾ: ಧರ್ಮಕ್ಕೆ ಹೋದ್ದಲ್ಲಿ ಕರ್ಮ ಬಂತು ಇತ್ಯಾದಿ.

13. ವಿಭಾವನಾಲಂಕಾರ—ಕಾರಣಕ್ಕೆ ವಿರೋಧವಾಗಿ ಕಾರ್ಯವನ್ನು ಹೇಳುವದಕ್ಕೆ ವಿಭಾವನಾಲಂಕಾರವೆನ್ನುವರು. ಉದಾ: ಚಂದ್ರಕಿರಣ ತಾಗಲು ಮೈಯ್ಯಲ್ಲಿ ಉರಿ ಹೆಚ್ಚಿತು ಇತ್ಯಾದಿ.

14. ತದ್ಗುಣಾಲಂಕಾರ—ಸ್ವಂತ ಗುಣವನ್ನು ಬಿಟ್ಟು ಅನ್ಯಗುಣವನ್ನು ಹೊಗಳುವದಕ್ಕೆ ತದ್ಗುಣಾಲಂಕಾರವೆನ್ನುವರು. ಉದಾ: ಕಿವಿಯ ಹೊಳಪಿನಿಂದ ತಾಟಂಕ ಶೋಭಿಸಿತು ಇತ್ಯಾದಿ.

15. ಅನ್ಯೋನ್ಯಭ್ರಾಂತ್ಯಲಂಕಾರ—2 ವಸ್ತುಗಳಲ್ಲಿ ಅನ್ಯೋನ್ಯಭ್ರಾಂತಿ ಹುಟ್ಟುವಿಕೆಗೆ ಅನ್ಯೋನ್ಯಭ್ರಾಂತ್ಯಲಂಕಾರವೆನ್ನುವರು. ಉದಾ: ತುಂಬಿಯು ಪಾಲಾಶಪುಷ್ಪವೆಂದು ಗಿಳಿಯ ಕೊಕ್ಕನ್ನು ಸಮೀಪಿಸಲು ಗಿಳಿಯು ನೇರಳೇ ಹಂಣೆಂದು ಅದನ್ನು ಕಚ್ಚಿತು ಇತ್ಯಾದಿ.

16. ಕಾರಣಮಾಲಾಲಂಕಾರ—ಒಂದು ಕಾರಣದಿಂದ ಮತ್ತೊಂದು, ಅದರಿಂದ ಬೇರೊಂದು, ಈ ಪ್ರಕಾರ ಕಾರಣಕಾರ್ಯಗಳು ನಡಿಯುತ್ತವೆಂದು ಹೇಳುವದಕ್ಕೆ ಕಾರಣಮಾಲಾಲಂಕಾರವೆನ್ನುವರು. ಉದಾ: ಸತ್ಸಂಗದಿಂದ ನಿಸ್ಸಂಗ, ನಿಸ್ಸಂಗದಿಂದ ನಿರ್ಮೋಹತ್ವ, ನಿರ್ಮೋಹತ್ವದಿಂದ ನಿಶ್ಚಿಂತತ್ವ, ನಿಶ್ಚಿಂತತ್ವದಿಂದ ಜೀವನಮುಕ್ತಿಕೂಡ ಉಂಟಾಗತ್ತದೆ.

17. ವಿಶೇಷೋಕ್ತ್ಯಲಂಕಾರ—ಕಾರಣವಿದ್ದು ಕಾರ್ಯ ನಡೆಯಲಿಲ್ಲವೆಂದು ಹೇಳುವದಕ್ಕೆ ವಿಶೇಷೋಕ್ತ್ಯಲಂಕಾರವೆಂಬ ಹೆಸರು. ಉದಾ: ಹುಣಸು ಮುಪ್ಪಾದರೂ ಹುಳಿ ಮುಪ್ಪಾಗಲಿಲ್ಲ ಇತ್ಯಾದಿ.

18. ಉದಾತ್ತಾಲಂಕಾರ—ಅನೇಕವಾದ ವಸ್ತುಗಳನ್ನು ಸಂಗಡಲೇ ವರ್ಣಿಸುವದಕ್ಕೆ ಉದಾತ್ತಾಲಂಕಾರವೆಂಬ ಹೆಸರು. ಉದಾ: ಲಸದ

ಮುಲರತ್ನ ಸೋಪಾನದಿಂ, ಮೀನದಿಂ, ಬಿಸವನಾಸ್ವಾದಿಸುವ ಚಕ್ರದಿಂ, ನಕ್ರದಿಂ ಇತ್ಯಾದಿ.

19. ಅತ್ಯಂತಾತಿಶಯೋಕ್ತ್ಯಲಂಕಾರ—ಕಾರಣಕ್ಕಿಂತಲೂ ಕಾರ್ಯ ಮುಂಚಿತವಾಗಿ ನಡೆಯಿತೆಂದು ವರ್ಣಿಸುವದಕ್ಕೆ ಅತ್ಯಂತಾತಿಶಯೋಕ್ತ್ಯಲಂಕಾರವೆಂಬ ಹೆಸರು. ಉದಾ: ಬಾ ಎಂದು ಕರೆಯುವ ಮಾತು ಹೊರಡುವದಕ್ಕಿಂತ ಮುಂಚೆ ಬಂದನು.

## ಪದ್ಯಗಳನ್ನು ಪ್ರಸ್ತಾರಮಾಡುವ ಕ್ರಮ.

165. ವರ್ಣಛಂದಸ್ಸಿನಲ್ಲಿ 1, ಮಾತ್ರಾಛಂದಸಿನಲ್ಲಿ 1, ಹೀಗೆ 2 ವೃತ್ತಗಳನ್ನು ಈ ಕೆಳಗೆ ಪ್ರಸ್ತಾರ ಮಾಡಿರುತ್ತದೆ; ಆಯಾ ಛಂದಸ್ಸಿನ ಬೇರೆ ಬೇರೆ ವೃತ್ತಗಳನ್ನು ಪ್ರಸ್ತಾರಮಾಡುವದು ಕೂಡ ಇದೇ ಕ್ರಮದಲ್ಲಿ ಎಂದು ತಿಳಿಯ ತಕ್ಕದ್ದು.

ವರ್ಣ ಛಂದಸ್ಸಿನಲ್ಲಿ-ಸರಳವೃತ್ತಕ್ಕೆ ಪ್ರಸ್ತಾರ:—

| | | | | | |
|---|---|---|---|---|---|
| ಮರುತಂ | ಜಾತವೇ | ದಂ | ಹರನಂ | ಕೂಡಿಬಂ | ದಂ |
| ⏑ ⏑ — | — ⏑ — | — | ⏑ ⏑ — | — ⏑ — | — |
| ದರವಿಂ | ದಾಯುತಾ | ಕ್ಷೇ | ಸರಳಂ | ವೃತ್ತನಾ | ಮಂ |
| ⏑ ⏑ — | — ⏑ — | — | ⏑ ⏑ — | — ⏑ — | — |

ಮಾತ್ರಾಛಂದಸ್ಸಿನಲ್ಲಿ ಕಂದಕ್ಕೆ ಪ್ರಸ್ತಾರ:—

ಪ್ರ ರ ಕ ರ ಗ ಣ ಗ ಳಾ ರುಂ 12
⏑ ⏑ ⏑ ⏑ ⏑ ⏑ ⏑ — —
ಸ ರ ಸಿ ಜ ಷ ಗ ೞಂ ಗ ಳ್ಗೆ ರ ಡು ಸಂ ಧಿ ಸಿ ಬ ಕೆರ್ಗಂ ‖ 20
⏑ ⏑ ⏑ ⏑ ⏑ ⏑ — ⏑ ⏑ ⏑ ⏑ — ⏑ ⏑ — —
ಚ ರ ಣ ಕ್ಕೆ ಸೀ ಸ ದಂ ದ ಪೊ 12
⏑ ⏑ — ⏑ — ⏑ — ⏑ ⏑
ಕ್ಕಿ ರ ಗಿಂ ತೆ ಕ ಸ ರ ಳ ತ್ತೆ ನ್ನೊ ಳೊ ಪ್ಪು ವ ತೆ ರ ದಿಂ ‖ 20
⏑ ⏑ — ⏑ ⏑ ⏑ ⏑ ⏑ — ⏑ — ⏑ ⏑ ⏑ ⏑ —

ಸಮಾಪ್ತಿ.

# ಶುದ್ಧಾಶುದ್ಧ ವಿವೇಕ.

| ಪುಟ. | ಪಂಗ್ತಿ. | ಅಶುದ್ಧ. | ಶುದ್ಧ. |
|---|---|---|---|
| 5 | 6 | ಘೋಷಾಕ್ಷರ | ಘೋಷಾಕ್ಷರ. |
| 9 | 3 | ಅಪವಾದವುಗಳು | ಅಪವಾದಗಳು. |
| 10 | 11 | ಕನ್ನಡು | ಕನ್ನಡ. |
| 10 | 22 | ರೇಪ | ರೇಫ. |
| 13 | 27 | (2ನೇ) ಅಯ್ | ಆಯ್. |
| 14 | 2 | ಅನಾಂದ | ಆನಂದ. |
| 16 | 6 | ಓಕಾರದೇಶ | ಓಕಾರಾದೇಶ. |
| 18 | 14 | II | III. |
| 18 | 15 | III | II. |
| 21 | 21 | ಅಲ್ಪಭುದ್ಧಿ | ಅಲ್ಪಬುದ್ಧಿ. |
| 25 | 13 | ಸಂಖೆ | ಸಂಖ್ಯೆ. |
| 26 | 11 | ಪೇಲಿನ | ಮೇಲಿನ. |
| 32 | 19 | ಮರವಸ್ನು | ಮರವನ್ನ. |
| 40 | 21 | ನಡಿಯತ್ತಾನೆ | ನಡಿಯುತ್ತಾನೆ. |
| 58 | 8 | ನೊಡ ಬೇಕು | ನೋಡ ಭೇಕು. |
| 59 | 24 | ಸ್ವ-ಸ್ವಕೀಯ | ಸ್ವ-ಸ್ವಕೀಯ. |
| 68 | 2 | ನಾದಗಳನ್ನು | ನಾದಗಳನ್ನೂ. |
| 72 | 24 | ಸಮಾಪಕಗಳ | ಸಮಾಪಕವಿಶೇಷಣಗಳ. |
| 78 | 21 | ಸಂಭಂಧ ವಾಕ್ಯ | ಸಂಬಂಧ ವಾಕ್ಯ. |
| 87 | 4 | ಕರ್ತೃಪದನನ್ನು | ಕರ್ತೃಪದವನ್ನು. |
| 87 | 26 | ಸರ್ವನಮಗಳು | ಸರ್ವನಾಮಗಳು |
| 99 | 8 | ಹಡುಗನು | ಹುಡುಗನು. |
| 101 | 3 | ನೊಡಿ | ನೋಡಿ. |
| 116 | 12 | ಯುಗಣ | 2 ಯಗಣ. [ಆಗಬೇಕು. |

‘ಕನ್ನಡು, ಸಂಖೆ” ಎಂದು ಇರುವ ಎಲ್ಲಾ ಶಬ್ದಗಳು ‘ಕನ್ನಡ, ಸಂಖ್ಯೆ

☞ ಇವುಗಳಲ್ಲಿ ಅನೇಕವು ಮುದ್ರಿಸುವ ಮಧ್ಯಕಾಲದಲ್ಲಿ ತಿದ್ದಲ್ಪಟ್ಟ

